ಪ್ರಾಥಮಿಕ ಶಾಲೆಯ ೭ನೆಯ ಮತ್ತು ಮಾಧ್ಯಮಿಕ ಶಾಲೆಯ ಕೆಳಗಿನ
ಇಯತ್ತೆಗಳಿಗಾಗಿ ಮಂಜೂರಾಗಿದೆ.

# ಹಿಂದುಸ್ಥಾನದ
# ಪ್ರಾಚೀನ ಇತಿಹಾಸ



ನ. ಶಾಂ. ಮೋಡಕ.

Sanctioned for Std. VII of Primary Schools & for Lower Secondary Schools.

# Ancient History of India

BY

**N. P. MODAK**

*Head Master Kanarese School, Hallikeri.*

ಪ್ರಾಥಮಿಕ ಶಾಲೆಗಳ ೭ನೆಯ ಮತ್ತು ಮಾಧ್ಯಮಿಕ ಶಾಲೆಗಳ ಕೆಳಗಿನ ಇಯತ್ತೆಗಳಿಗಾಗಿ.

# ಹಿಂದುಸ್ಥಾನದ ಪ್ರಾಚೀನ ಇತಿಹಾಸ

ಇದನ್ನು

**ನರಸಿಂಹ ಪಾಂಡುರಂಗ ಮೋಡಕ**

ಹೆ. ಮಾ. ಕನ್ನಡ ಶಾಲಾ-ಹಳ್ಳೀಕೇರಿ (ಜಿ. ಧಾರವಾಡ)

ಇವರು ರಚಿಸಿದರು.

**ಗದಗ**

ಮುನ್‌ಷಿ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.



**೧೯೩೭**

**Price 0-6-0)** **( ಬೆಲೆ ೦-೬-೦**

# ಮೊದಲನೆಯ ಆವೃತ್ತಿಯ ಮುನ್ನುಡಿ



ಈಶ ಕೃಪೆಯಿಂದ ಈಗ ಹಿಂದುಸ್ಥಾನದ ಪ್ರಾಚೀನ ಇತಿಹಾಸ ಎಂಬ ಈ ಪುಸ್ತಕವನ್ನು ಬರೆದು ಪ್ರಕಟಿಸುವ ಸುಯೋಗವು ಉಂಟಾದುದಕ್ಕೆ ತುಂಬಾ ಸಂತೋಷವೆನಿಸುತ್ತದೆ. ಈ ಮೊದಲು ಬರೆದ ೫ನೆಯ-೬ನೆಯ ಇಯತ್ತೆಗಳ ಕ್ರಮವನ್ನು ಅನುಸರಿಸಿಯೆ ಈ ಪುಸ್ತಕವು ಬರೆದಿದೆ. ಇದರಲ್ಲಿ ವೇದಕಾಲದಿಂದ, ಮುಸಲ್ಮಾನರ ಆಳಿಕೆಯು ಈ ದೇಶದಲ್ಲಿ ಆರಂಭವಾಗುವ ಕಾಲದ ವರೆಗಿನ ಪ್ರಾಚೀನಕಾಲದ ಇತಿಹಾಸವು ಎರಡು ಭಾಗಗಳಲ್ಲಿ ಪಾಠರೂಪದಿಂದ ವಿವರಿಸಿದೆ ಪ್ರಾಚೀನಕಾಲದ ಇತಿಹಾಸದಲ್ಲಿಯ, ಸಿಕಂದರನ ದಾಳಿಯ ಮುಂಚಿನ ಕಾಲದ ಇತಿಹಾಸವು ಆ ದಾಳಿಯು ತರುವಾಯದ ಕಾಲದ ಇತಿಹಾಸದಷ್ಟು ಸುಸಂಗತವೂ ವಿಶ್ವಸನೀಯವೂ ಆಗಿ ಉಪಲಬ್ಧವಾಗಿಲ್ಲ. ಆದದರಿಂದ, ವೇದಕಾಲದಿಂದ ಸಿಕಂದರನ ದಾಳಿಯು ವರೆಗಿನ ಕಾಲದ ಇತಿಹಾಸವು ಅತಿಪ್ರಾಚೀನಕಾಲ ಎಂಬ ಮೊದಲನೆಯ ಭಾಗದಲ್ಲಿಯೂ, ಆ ದಾಳಿಯ ತರುವಾಯದ ಕಾಲದ ಇತಿಹಾಸವು ಪ್ರಾಚೀನ ಕಾಲ ಎಂಬ ಎರಡನೆಯ ಭಾಗದಲ್ಲಿಯೂ ಹೇಳಲ್ಪಟ್ಟಿದೆ. ವಿಷಯವು ಸುಗಮವಾಗಲೆಂದು ಅಲ್ಲಲ್ಲಿ ಹಲವು ಚಿತ್ರ-ನಕ್ಷೆಗಳು ಸೇರಿಸಿವೆ. ಅಲ್ಲದೆ ಪ್ರತಿಯೊಂದು ಭಾಗದ ಕೊನೆಯಲ್ಲಿ ಆ ಆ ಭಾಗಗಳ ಸಂಬಂಧದ ರಾಜವಂಶಗಳೂ ಮಹತ್ವದ ಸಂಗತಿಗಳ ಕಾಲಗಳೂ ಮಾದರಿಯ ಪ್ರಶ್ನೆಗಳೂ ಕೊಟ್ಟಿವೆ.

ಸಾರಾಂಶ, ೭ನೆಯ ಇಯತ್ತೆಯ ಮತ್ತು ವ್ಹರ್ನಾಕ್ಯುಲರ ಫಾಯನಲ್ ಪರೀಕ್ಷೆಯ ವಿದ್ಯಾರ್ಥಿಗಳು ೫ನೆಯ ೬ನೆಯ ಇಯತ್ತೆಗಳ ಇತಿಹಾಸಗಳ ಆವರ್ತನೆಯೊಂದಿಗೆ ಈ ಪುಸ್ತಕವನ್ನು ಅಭ್ಯಾಸಿಸಿದಲ್ಲಿ ಅವರು ಸಂಪೂರ್ಣ ಹಿಂದುಸ್ಥಾನದ ಇತಿಹಾಸವನ್ನು ಅರಿತಂತೆ ಆಗುವದು.

ಈ ಪುಸ್ತಕವನ್ನು ಬರೆಯುತ್ತಿರುವಾಗ ವಿ. ಲಿಂ. ಎ. ಹೊಂಬಳ, ಹೆ. ಮಾ. ೨ನೆಯ ನಂ. ಶಾಲೆ, ಗದಗ; ಮತ್ತು ಕ. ರಾ. ಗಣಾಚಾರ, ಆ ಮಾ. ೧ನೆಯ ನಂ. ಶಾಲೆ, ಬೆಟಗೇರಿ (ಗದಗ) ಇವರು ಆಗಾಗ್ಗೆ ಮಾಡಿದ ನೆರವು ಹೆಚ್ಚಿನದಾಗಿದೆ. ಇವರಲ್ಲದೆ, ಇತಿಹಾಸಜ್ಞರೂ ಹಿತಚಿಂತಕರೂ ಆದ ಹಲವರು ಮಹನೀಯರು ನಾನು ಬೇಡಿದ ನೆರವನ್ನು ನೀಡಿರುವರು. ಮತ್ತು ವಿ ಎಸ್. ಎಮ್. ಮುನ್‌ಷಿ ಅವರು ೫ನೆಯ ೬ನೆಯ ಇತಿಹಾಸ ಪುಸ್ತಕಗಳಂತೆ ಈ ಪುಸ್ತಕವನ್ನು ಕೂಡ ಅಂದವಾಗಿಯೂ ಶೀಘ್ರವಾಗಿಯೂ ಮುದ್ರಿಸಿಕೊಟ್ಟಿರುವರು.

ಆದದರಿಂದ ನನಗೆ ನೆರವಾದ ವ್ಯವಸಾಯ ಬಂಧುಗಳ, ಮಹನೀಯರ, ಇತಿಹಾಸ ಗ್ರಂಥಗಳ ಕರ್ತರ, ಮುದ್ರಕರ ಅಭಾರಗಳನ್ನು ಮನ್ನಿಸುವೆನು.

ತಾ. ೨೦–೧೧–೧೯೩೩. ನ. ಸಾಂ. ಮೋಡಕ.

# ೨ನೆಯ ಆವೃತ್ತಿಯ ಮುನ್ನುಡಿ



ಈ ಪುಸ್ತಕದ **೧ನೆಯ ಆವೃತ್ತಿ**ಯನ್ನು ಪಠ್ಯ ಪುಸ್ತಕವೆಂದು ಮಂಜೂರ ಮಾಡಿದ ಮೆ॥ ಡಾಯರೆಕ್ಟರ ಆಫ್ ಪಬ್ಲಿಕ್ ಇನಸ್ಟ್ರಕ್ಶನ್ ಬಾಂಬೆ ಮತ್ತು ಮೆ॥ ಟೆಕ್ಸ್ಟ ಕಮಿಟಿ ದಕ್ಷಿಣಭಾಗ ಜಿ. ಧಾರವಾಡ ಇವರ ಉದಾರ ಆಶ್ರಯವೂ ಮೇಲಾಗಿ ಶಿಕ್ಷಣ ಪ್ರೇಮಿಗಳಾದ ನನ್ನ ವ್ಯವಸಾಯ ಬಂಧು-ಭಗಿನಿಯರ ಪ್ರೋತ್ಸಾಹವೂ ಮುಖ್ಯ ಕಾರಣವಾಗಿ ಈ ಪುಸ್ತಕದ **೨ನೆಯ ಆವೃತ್ತಿ**ಯನ್ನು ಮುದ್ರಿಸುವ ಸುಯೋಗವು ಉಂಟಾಯಿತು ೨ನೆಯ ಆವೃತ್ತಿಯಲ್ಲಿ ಇತಿಹಾಸ ವಿಷಯವು ಸುಬೋಧವಾಗಲುದ್ದಿಶ್ಯ ಆಯಾ ರಾಜಮನೆತನದ ಕಾಲಕ್ಕೆ ಹಬ್ಬಿದ ರಾಜ್ಯವಿಸ್ತಾರದ ಮೇರೆಯನ್ನೂ ಮಾಂಡಲಿಕ ಅರಸರ ರಾಜ್ಯದ ಮೇರೆಯನ್ನೂ ತೋರಿಸುವ ಒಂಭತ್ತು ನಕಾಶಗಳು ಹೆಚ್ಚಾಗಿ ಸೇರಿಸಲ್ಪಟ್ಟಿವೆ. ಟೆಕ್ಸ್ಟಬುಕ್ ಕಮಿಟಿಯವರು ಕೊಟ್ಟ ಸೂಚನೆಗಳಿಗನುಸರಿಸಿ ಈ ಆವೃತ್ತಿಯಲ್ಲಿ ಸುಧಾರಣೆ ಮಾಡಿದೆ.

ತಾ. ೨೨-೨-೧೯೩೭ 

ತಮ್ಮ ಕೃಪಾಭಿಲಾಷಿ,

**ನ. ಸಾಂ. ನೋಡಕ.**



# ಅನುಕ್ರಮಣಿಕೆ.



## ಮೊದಲನೆಯ ಭಾಗ.

**ಅತಿ ಪ್ರಾಚೀನಕಾಲ.** (ಕ್ರಿ. ಶ. ಪೂ. ೨೦೦೦—ಕ್ರಿ. ಶ. ಪೂ. ೩೨೭).



## ಎರಡನೆಯ ಭಾಗ

**ಪ್ರಾಚೀನಕಾಲ.** (ಕ್ರಿ. ಶ. ಪೂ. ೩೨೦—ಕ್ರಿ. ಶ. ೧೨೦೫).

# ಹಿಂದುಸ್ಥಾನದ ಪ್ರಾಚೀನ ಇತಿಹಾಸ

## ಮೊದಲನೆಯ ಭಾಗ.

**ಅತಿ ಪ್ರಾಚೀನಕಾಲ.** (ಕ್ರಿ. ಶ. ಪೂ. ೨೦೦೦ ದಿಂದ ಕ್ರಿ. ಶ. ಪೂ. ३೨೭)



## ೧ನೆಯ ಪಾಠ.

### ಹಿಂದುಸ್ಥಾನದ ಭೌಗೋಲಿಕ ವಿಚಾರವೂ ಪರಿಸ್ಥಿತಿಯೂ.



೧. **ಉಪೋದ್ಘಾತ:—** ಯಾವದೊಂದು ದೇಶದ ಇತಿಹಾಸವನ್ನು ಅಭ್ಯಾಸಿಸುವವರಿಗೆ ಆ ದೇಶದ ಭೂಗೋಲ ಜ್ಞಾನವು ಆಗಿರುವದು ಅವಶ್ಯವು. ಏಕೆಂದರೆ ಭೂಮಿಯ ಪ್ರಾಕೃತಿಕ ಸಂಗತಿಗಳು ಇತಿಹಾಸದ ಹಲವು ಸ್ಥಿತ್ಯಂತರಗಳಿಗೆ ಕಾರಣಗಳಾಗಿರುವವು.

ಹೀಗೆ ಅವಶ್ಯವಿರುವ ಭೂಗೋಲ ಜ್ಞಾನವನ್ನು ಬೇರೆ ಸ್ವತಂತ್ರವಾದ ಪುಸ್ತಕದಿಂದ ಹೊಂದುವದು ಯೋಗ್ಯವಿದ್ದರೂ ಇಲ್ಲಿ ಮಹತ್ವದ ಕೆಲವು ಭೂಗೋಲದ ಸಂಗತಿಗಳನ್ನು ವಿಚಾರಿಸಿ ಅವುಗಳನ್ನು ಕಣ್ಣುಮುಂದೆ ಇರಿಸಿಕೊಂಡು ಇತಿಹಾಸವನ್ನು ಅಭ್ಯಾಸಿಸಿದಲ್ಲಿ ಬೇರೆ ಬೇರೆ ಕಾಲಗಳಲ್ಲುಂಟಾಗುವ ಆಗುಹೋಗುಗಳ ಕಲ್ಪನೆಯು ನಮಗುಂಟಾಗುವದು.

೨. **ಹಿಂದುಸ್ಥಾನದ ಪ್ರಾಕೃತಿಕ ಸ್ವರೂಪ:—** ಹಿಂದುಸ್ಥಾನವು ಒಂದು ದೊಡ್ಡ ದ್ವೀಪಕಲ್ಪವಾಗಿದ್ದು ಭದ್ರವಾದ ಗೋಡೆಗಳಂತಿರುವ ಹಾಲಾ, ಸುಲೈಮಾನ, ಹಿಂದುಕುಶ, ಕಾರಾಕೋರಾನ, ಹಿಮಾಲಯ, ಆಸಾಮು, ಎಂಬ ಪರ್ವತಾವಳಿಗಳೂ ಬಂಗಾಲದ ಉಪಸಾಗರ ಹಿಂದೀ ಮಹಾಸಾಗರ, ಅರಬೀ ಸಮುದ್ರ ಎಂಬ ಜಲರಾಶಿಗಳೂ ಇದನ್ನು ಸುತ್ತುಗಟ್ಟಿರುವವು. ಉತ್ತರದ ಪರ್ವತಾವಳಿಗಳೊಳಗಿನ ಒಂದೆರಡು ಕಣವೆಯ

ದಾರಿಗಳಲ್ಲದೆ ಹೊರದೇಶಗಳಿಂದ ಈ ದೇಶಕ್ಕೆ ಬರಲು ಬೇರೆ ದಾರಿಗಳಿಲ್ಲ. ಪೂರ್ವಕಾಲದಲ್ಲಿ ಈಗಿನಂಥ ದೊಡ್ಡ ದೊಡ್ಡ ಉಗಿಹಡಗಗಳು ಬಳಕೆಯಲ್ಲಿರಲಿಲ್ಲವಾದದರಿಂದ ಬೇರೆ ದೇಶದವರು ಸಮುದ್ರ ಮಾರ್ಗವಾಗಿ ಈ ದೇಶಕ್ಕೆ ಬರುವದಂತು ಒಳ್ಳೆಯ ಕಠಿಣವಾಗಿತ್ತು.




ಅ. **ಉತ್ತರ ಹಿಂದುಸ್ಥಾನ:—** ಖಂಬಾಯತದ ಆಖಾತದಿಂದ ಮಹಾನದಿಯ ಮುಖದ ವರೆಗೆ ಹಬ್ಬಿದ ವಿಂಧ್ಯಪರ್ವತವು ಹಿಂದುಸ್ಥಾನವನ್ನು ಇಬ್ಭಾಗಿಸುವದು. ಈ ಪರ್ವತಾವಳಿಯ ಉತ್ತರದ ಭಾಗಕ್ಕೆ ಉತ್ತರ ಹಿಂದುಸ್ಥಾನವೆಂದೂ, ದಕ್ಷಿಣದ ಭಾಗಕ್ಕೆ ದಕ್ಷಿಣ ಹಿಂದುಸ್ಥಾನವೆಂದೂ ಹೆಸರು.

ಉತ್ತರ ಹಿಂದುಸ್ಥಾನದ ಸಿಂಧು, ಗಂಗಾ, ಯಮುನಾ ಎಂಬ ಹೊಳೆಗಳೂ ಇವುಗಳ ಶಾಖೆಗಳೂ ಹರಿಯುವ ಪ್ರದೇಶವು ಬಹಳ ಬೆಳೆಯುಳ್ಳದ್ದು. ಈ ಹೊಳೆಗಳೊಳಗಿಂದ ಹರಿದುಬಂದ ಹಿಮಾಲಯದ ರೇವೆಯಿಂದ ಈ ಭಾಗದ ಭೂಮಿಯು ಉಂಟಾಗಿರುವದು. ಹಿಂದೀ ಮಹಾಸಾಗರದ ಮೇಲಿನಿಂದ ಬರುವ ಮಳೆಗಾಳಿಯನ್ನು ಹಿಮಾಲಯವು ತಡೆಯುವದರಿಂದ ಉತ್ತರ ಹಿಂದುಸ್ಥಾನದ ಬಹಳ ಭಾಗದಲ್ಲಿ ಸಾಕಷ್ಟು ಮಳೆ ಸುರಿಯುವದು. ಮಳೆಗಾಲದಲ್ಲಿ ಮಳೆಯ ನೀರಿನಿಂದಲೂ ಬೇಸಗೆಯಲ್ಲಿ ಹಿಮಾಲಯದಲ್ಲಿಯ ಧರ್ಪವು ಕರಗಿಬಂದ ನೀರಿನಿಂದಲೂ ಸಿಂಧು, ಗಂಗಾ, ಮುಂತಾದ ಹೊಳೆಗಳು ಹೊರಸೂಸಿ ಹರಿದು ದಂಡೆಯ ಪ್ರದೇಶಗಳಿಗೆ ವಿಪುಲವಾದ ನೀರನ್ನು ಪೂರೈಸುತ್ತವೆ. ಈ ಹೊಳೆಗಳ ಬೈಲುಪ್ರದೇಶವು ಬಹುತರ ಸಮನೆಲದ್ದಾಗಿರುವುದರಿಂದ ಬೇಕಾದಲ್ಲಿ ಕಾಲುವೆಗಳನ್ನು ಕಟ್ಟಿಕೊಂಡು ನೀರೊಯ್ಯಲು ಅನುಕೂಲವಿದೆ. ಈ ಪ್ರದೇಶದ ಹವೆಯು ಒಕ್ಕಲತನಕ್ಕೂ ಜನರ ಆರೋಗ್ಯಕ್ಕೂ ತಕ್ಕದ್ದಾಗಿರುವದು. ಹೀಗೆ ಎಲ್ಲ ಬಗೆಯ ಅನುಕೂಲತೆಗಳಿರುವ ಪ್ರದೇಶವು ಸುಖ-ಸಂಪತ್ತುಗಳ ಮೆಟ್ಟಾಗಿರುವದು ಸಹಜ.

**ಆ. ದಕ್ಷಿಣ ಹಿಂದುಸ್ಥಾನ :—** ಇದು ತ್ರಿಕೋಣಾಕಾರದ ತಪ್ಪಲ ಪ್ರದೇಶವು. ವಿಂಧ್ಯಪರ್ವತ, ಪೂರ್ವಘಟ್ಟ, ಸಹ್ಯಾದ್ರಿ ಇವು ತಪ್ಪಲಿನ ಅಂಚುಗಳು. ನೈಋತ್ಯದ ಮಳೆಗಾಳಿಯಿಂದ ದಕ್ಷಿಣ ಹಿಂದುಸ್ಥಾನದ ಪಶ್ಚಿಮಾರ್ಧಪ್ರದೇಶಕ್ಕೂ ಈಶಾನ್ಯದ ಮಳೆಗಾಳಿಯಿಂದ ಪೂರ್ವಾರ್ಧ ಪ್ರದೇಶಕ್ಕೂ ಮಳೆಯು ಚೆನ್ನಾಗಿ ಬೀಳುವದು. ದಕ್ಷಿಣಕ್ಕೆ ನೀಲಗಿರಿಯ ಕಡೆಗೆ ಸಾಗಿದಂತೆ ಮಳೆಯ ಮಾನವು ಹೆಚ್ಚುವದು. ಪೂರ್ವ - ಪಶ್ಚಿಮ ಘಟ್ಟಗಳ ಕೆಳಗೆ ಸಮುದ್ರದ ವರೆಗೆ ಕಿರಿಅಗಲಾಗಿರುವ ಪಟ್ಟಿಗಳು ದಕ್ಷಿಣೋತ್ತರವಾಗಿ ಹಬ್ಬಿವೆ. ಈ ಭಾಗಗಳಿಂದ ಒಳದೇಶಕ್ಕೆ ಬರಲು ಹಲಕೆಲವು ಕಣಿವೆಯ ಮಾರ್ಗಗಳಿರುವವು.

ಈ ದಕ್ಷಿಣ ಹಿಂದುಸ್ಥಾನದ ಭೂಮಿಯು ಬೆಳೆಯುಳ್ಳದ್ದು. ಹವೆಯು ಉತ್ತಮವಾದದ್ದು. ಕೆರೆಕಾಲುವೆಗಳಿಂದ ಭೂಮಿಗೆ ನೀರನ್ನೊದಗಿಸಿಕೊಳ್ಳಲು

ಎಲ್ಲ ಕಡೆಗೆ ಅಷ್ಟು ಅನುಕೂಲತೆಗಳಿಲ್ಲ. ಈ ಭಾಗದಲ್ಲಿಯ ನರ್ಮದಾ, ತಾಪಿ, ಗೋದಾವರಿ, ಕೃಷ್ಣಾ, ತುಂಗಭದ್ರಾ, ಕಾವೇರಿ ಮುಂತಾದ ಹೊಳೆಗಳು ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವವು. ಇವುಗಳಲ್ಲಿಯ ಕೆಲವಂತು ಬೇಸಗೆಯಲ್ಲಿ ಹರಿಗಡಿಯುವವು. ದಂಡೆಯ ಪ್ರದೇಶವು ಎತ್ತರವಿರುವದು. ಆದರೂ ಅನುಕೂಲವಿರುವಲ್ಲಿ ಕಾಲುವೆಗಳಿರುವವು. ಕೆಲವು ಕೆರೆಗಳಿಂದಲೂ ಭೂಮಿಗೆ ನೀರು ದೊರೆಯುವದು. ಬಹುಭಾಗದ ಬೆಳೆಯು ಮಳೆಯನ್ನವಲಂಬಿಸಿರುವದರಿಂದ ಬರದ ಭಯವು ಹೆಚ್ಚು. ಒಟ್ಟಿನಮೇಲೆ ದಕ್ಷಿಣ ಹಿಂದುಸ್ಥಾನವಾದರೂ ಜನರು ಸುಖದಿಂದ ಜೀವಿಸಲು ತಕ್ಕದ್ದಾಗಿರುವದು.

**೩. ಹಿಂದುಸ್ಥಾನಕ್ಕೆ ಬಂದ ವಿದೇಶದ ಜನಾಂಗಗಳು :—** ಈ ರೀತಿ ಹಿಂದುಸ್ಥಾನದ ಪ್ರಾಕೃತಿಕ ಸ್ವರೂಪವು ಜನರ ಬಾಳುವೆಗೆ ಯೋಗ್ಯವಾಗಿರುವುದನ್ನು ಕಂಡು ನಮ್ಮ ಪೂರ್ವಜರಾದ ಆರ್ಯರು ಅತಿ ಪ್ರಾಚೀನಕಾಲದಲ್ಲಿ ಈ ದೇಶಕ್ಕೆ ಬಂದು ನೆಲೆಗೊಂಡರು.

ಆರ್ಯರಿಗಿಂತ ಮೊದಲು ನಿಗ್ರೋ ಮುಂತಾದ ಕಾಡುಜನರೂ ತಕ್ಕ ಮಟ್ಟಿಗೆ ಸುಧಾರಿಸಿದ್ದ **ದ್ರವಿಡರೂ** ಹಿಂದುಸ್ಥಾನವನ್ನು ಪ್ರವೇಶಿಸಿದ್ದರು. ಮತ್ತು ಆರ್ಯರ ತರುವಾಯ **ಗ್ರೀಕ, ಶಕ, ಕುಶಾನ, ಪಾರ್ಥಿಯನ್** ಮೊದಲಾದ ಜನರು ವಾಯವ್ಯ ಮಾರ್ಗವಾಗಿ ಈ ದೇಶಕ್ಕೆ ಬಂದರು. ಇವರೆಲ್ಲರು ಆರ್ಯಸಂಸ್ಕೃತಿಗೆ ವಶರಾಗಿ ಕಾಲಾಂತರದಿಂದ ಅವರಲ್ಲಿ ಕೂಡಿಹೋದರು. ಆದರೆ ಈ ಬೇರೆ ಬೇರೆ ಜನಾಂಗಗಳ ಸಂಸರ್ಗದ ಪರಿಣಾಮವು ಆರ್ಯಸಂಸ್ಕೃತಿಯ ಮೇಲೆ ಆಗದೆ ಇರಲಿಲ್ಲ.

ಕ್ರಿ. ಶ. ೧೩ನೆಯ ಶತಕದ ಆರಂಭಕ್ಕೆ ಎಂದರೆ ಮುಸಲ್ಮಾನರ ಆಳಿಕೆಯು ಈ ದೇಶದಲ್ಲಿ ಆರಂಭವಾದಂದಿನಿಂದ ಹಿಂದು ಮತ್ತು ಮಹಮದೀಯ ಈ ಎರಡು ಸಂಸ್ಕೃತಿಗಳಲ್ಲಿ ವಿಶೇಷ ಸಂಬಂಧವು ಉಂಟಾಗಹತ್ತಿತು. ಅಂದಿನಿಂದ ಮುಂದೆ ಸುಮಾರು ಐದುನೂರು ವರ್ಷಗಳ ವರೆಗೆ ಈ ದೇಶದಲ್ಲಿ ಮುಸಲ್ಮಾನರ ಆಳಿಕೆಯು ಪ್ರಬಲವಾಗಿತ್ತು.

ಕ್ರಿ. ಶ. ೧೫ನೆಯ ಶತಕದ ಕೊನೆಯಲ್ಲಿ ಯುರೋಪದವರು ವ್ಯಾಪಾರದ ನೆವದಿಂದ ಸಮುದ್ರ ಮಾರ್ಗವಾಗಿ ಈ ದೇಶಕ್ಕೆ ಬರಲಾರಂಭಿಸಿದರು. ಮುಂದೆ ಅವರಲ್ಲಿಯ ಇಂಗ್ಲಿಷರಿಗೆ ಮಾತ್ರ ದೈವವು ಹೆಚ್ಚು ಅನುಕೂಲವಾಯಿತು. ವ್ಯಾಪಾರವನ್ನು ಮಾಡುತ್ತಿರುವಾಗಲೆ ರಾಜ್ಯವು ಅವರ ಕೈವಶವಾಗುವ ಸಂಭವವುಂಟಾಯಿತು. ಮುಂದೆ ಕ್ರಿ. ಶ. ೧೯ನೆಯ ಶತಕದ ಆರಂಭದಿಂದ ಇವರು ಈ ದೇಶದಲ್ಲಿ ತಮ್ಮ ಅಧಿಕಾರವನ್ನು ಸ್ಥಿರಪಡಿಸಹತ್ತಿದರು.

**ಇಂಗ್ಲಿಷರ ಆಳಿಕೆಯ ಪರಿಣಾಮ**:— ಇಂಗ್ಲಿಷರು ಈ ದೇಶವನ್ನು ಆಳಹತ್ತಿದಂದಿನಿಂದ ಇಲ್ಲಿಯ ಪರಿಸ್ಥಿತಿಯು ಒತ್ತರದಿಂದ ಬದಲಾಗುತ್ತ ನಡೆದಿದೆ. ಒಂದೇ ತರದ ವ್ಯವಸ್ಥೆಯಿಂದ ಇಡಿಯ ದೇಶದ ಕಾರಭಾರವು ಸಾಗಿದೆ. ಪೋಸ್ಟು, ತಾರು, ಉಗೆಬಂಡಿ, ಮೋಟರು ಮೊದಲಾದ ಸಾಧನಗಳಿಂದ ಪ್ರಾಂತಪ್ರಾಂತಗಳಲ್ಲಿಯ ಒಳಕೆಯು ಹೆಚ್ಚಾಗಿದೆ. ಆಶ್ಚರ್ಯಕರವಾದ ಹಲವು ಶಾಸ್ತ್ರೀಯ ಶೋಧಗಳಿಂದ ಜನರ ಜೀವನ ಕ್ರಮದಲ್ಲಿ ಎಷ್ಟೋ ಸೌಲಭ್ಯಗಳುಂಟಾಗಿವೆ. ವಿದ್ಯಾಪ್ರಸಾರವು ಹೆಚ್ಚಾಗಿದೆ. ಜಗತ್ತಿನ ಉಳಿದ ರಾಷ್ಟ್ರಗಳ ಸ್ಥಿತಿಗತಿಯ ಜ್ಞಾನವಾಗಿದೆ. ಜನರಿಗೆ ತಮ್ಮ ಇರವು ಹೇಗಿರುವದೆಂಬ ಅರಿವು ಹುಟ್ಟಿದೆ. ಜಾಣರೂ ಸಾಹಸಿಗರೂ ಸ್ವಾತಂತ್ರ್ಯ ಪ್ರೇಮಿಗಳೂ ಆದ ಇಂಗ್ಲಿಷರ ಸಹವಾಸದಿಂದ ಇಷ್ಟವಾದ ಹಲವು ಸುಧಾರಣೆಗಳು ಆಗಹತ್ತಿವೆ. ಇಡಿಯ ಹಿಂದೀ ರಾಷ್ಟ್ರವು ಒಂದೇ ಎಂಬ ಭಾವನೆಯು ದೃಢವಾಗಿದೆ. ಜಗತ್ತಿನಲ್ಲಿ ಅಭಿಮಾನದಿಂದಲೂ ವೈಭವದಿಂದಲೂ ಬಾಳಲು ತಕ್ಕ ಉತ್ಕರ್ಷವನ್ನು ಪಡೆಯಲು ರಾಷ್ಟ್ರವು ಆತುರವಾಗಿದೆ.

**೫. ಇತಿಹಾಸದ ಉಪಯೋಗ** :— ಇತಿಹಾಸವೆಂದರೆ **ಅನುಭವಗಳ ಸಂಗ್ರಹವು.** ಅನುಭವದಿಂದ ಸರಿಯಾದುದೆಂದು ತೋರಿದ ಮಾರ್ಗವನ್ನೇ ಜನಾಂಗವು ಅನುಸರಿಸಬೇಕು; ತಪ್ಪು ದಾರಿಯನ್ನು ಬಿಟ್ಟುಬಿಡಬೇಕು. ಪೂರ್ವಜರ ಸ್ಫೂರ್ತಿದಾಯಕವಾದ ಚರಿತ್ರೆಗಳ ಅಭ್ಯಾಸದಿಂದ ನಮ್ಮಲ್ಲಿ ಆತ್ಮವಿಶ್ವಾಸವೂ ಉತ್ಸಾಹವೂ ಉಂಟಾಗುವದು. ಆದುದರಿಂದ

ನಮ್ಮ ದೇಶದ ಭೌಗೋಲಿಕ ಸಂಗತಿಗಳನ್ನೂ ಈಗಿನ ಪರಿಸ್ಥಿತಿಯನ್ನೂ ಲಕ್ಷದಲ್ಲಿಟ್ಟುಕೊಂಡು ಇತಿಹಾಸ ವಿಷಯವನ್ನು ಅಭ್ಯಾಸಿಸಬೇಕು.

## ೨ನೆಯ ಪಾಠ.

### ಆರ್ಯ ಸಂಸ್ಕೃತಿಯ ಮಹತ್ವವೂ ಇತಿಹಾಸ ಸಂಶೋಧನವೂ.



**೧. ಹಿಂದೀ ರಾಷ್ಟ್ರದ ಪ್ರಾಚೀನತೆ :—** ಹಿಂದುಸ್ಥಾನದ ಪ್ರಾಕೃತಿಕ ಸ್ವರೂಪವು ಜನರ ಬಾಳುವೆಗೆ ಹೆಚ್ಚು ಅನುಕೂಲವಾಗಿರುವುದರಿಂದ ನಮ್ಮ ಪೂರ್ವಜರಾದ ಆರ್ಯರು § ಬಹು ಪ್ರಾಚೀನ ಕಾಲದಲ್ಲಿ ಈ ದೇಶಕ್ಕೆ ಬಂದು ನೆಲೆಗೊಂಡರು ಮತ್ತು ಅವರು ತಮ್ಮ ಶೌರ್ಯ, ಚಾತುರ್ಯ, ಸಾಹಸ, ನೀತಿ ಇವುಗಳ ಬಲದಿಂದ ಸುಸಂಸ್ಕೃತಿಯನ್ನು ಹೊಂದಿ ಸುಖ-ಸಂಪತ್ತುಗಳಿಂದ ಮೆರೆದು ಸ್ಥಿರವಾದ ಕೀರ್ತಿಯನ್ನು ಪಡೆದರು. ಆರ್ಯರ ವೇದಗ್ರಂಥಗಳಷ್ಟು ಪುರಾತನ ಗ್ರಂಥಗಳು ಬೇರೆ ಯಾವವೂ ಇಲ್ಲ. ಪ್ರಾಚೀನಕಾಲದ ಇತಿಹಾಸವೆಂದರೆ ಈ ಆರ್ಯರ ಸಂಸ್ಕೃತಿಯ ಇತಿಹಾಸವೇ ಸರಿ.

**೨. ಆರ್ಯ ಸಂಸ್ಕೃತಿಯ ಶ್ರೇಷ್ಠತೆ :—** † ಭಾರತೀಯರ ಹಿಂದೀ ರಾಷ್ಟ್ರದಂತೆಯೆ ಇಜಿಪ್ತ, ಚೀನ, ಬಾಬಿಲೋನಿಯ, ಅಸೀರಿಯ ಮುಂತಾದ ರಾಷ್ಟ್ರಗಳಾದರು ಪ್ರಾಚೀನಕಾಲದಲ್ಲಿ ಒಳ್ಳೆಯ ವೈಭವವನ್ನು ಹೊಂದಿದ್ದವು.

---

§ ಸಿಂಧಪ್ರಾಂತದಲ್ಲಿ ಮೋಹೆಂಜೋ ದಾರೋ ಮತ್ತು ಮುಲತಾನದ ನೆರೆಯಲ್ಲಿ ಹರಪ್ಪಾ ಎಂಬ ನೆಲದೊಳಗೆ ಹೂಳಿದ್ದ ಎರಡು ಪಟ್ಟಣಗಳನ್ನು ಪುರಾಣ ವಸ್ತುಸಂಶೋಧನ ಖಾತೆಯವರು ಗೊತ್ತಹಚ್ಚಿರುವರು ಈ ಪಟ್ಟಣಗಳ ಕುರುಹುಗಳ ಮೇಲಿಂದ ಈ ಪಟ್ಟಣಗಳು ಕ್ರಿ. ಶಕಕ್ಕೆ ಮುಂಚೆ ಮೂರು ನಾಲ್ಕು ಸಾವಿರ ವರ್ಷಗಳ ಆಚೆಯೆಂದು ಗೊತ್ತಾಗುವದು ಆದದರಿಂದ ಆರ್ಯರ ಆರಂಭಕಾಲವು ಕ್ರಿ. ಶ ಮುಂಚೆ ೩-೪ ಸಾವಿರ ವರ್ಷಗಳ ಹಿಂದಿನದೆಂಬ ಮಾತನ್ನು ಎಲ್ಲರು ಒಪ್ಪಬೇಕಾಗುವದೆಂದು ತೋರುವದು.

† ದುಷ್ಯಂತರಾಜನ ಮಗನೂ ಮಹಾ ಪರಾಕ್ರಮಿಯೂ ಆದ ಭರತರಾಜನಿಂದ ಈ ದೇಶಕ್ಕೆ 'ಭರತಖಂಡ' ಎಂಬ ಹೆಸರುಂಟಾಯಿತು. ಭರತಖಂಡದ ಜನರು ಭಾರತೀಯರು.

ಆದರೆ ಚೀನದ ಹೊರತಾದ ಯಾವ ರಾಷ್ಟ್ರವೂ ತಮ್ಮ ಸಂಸ್ಕೃತಿಯನ್ನು ಈಗಿನ ತನಕ ಕಾದುಕೊಂಡಿಲ್ಲ. ಹಿಂದುಗಳ ಸಂಸ್ಕೃತಿಯ ಪರಂಪರೆಯು ಪ್ರಾಚೀನಕಾಲದಿಂದ ಈ ವರೆಗೆ ಅಖಂಡವಾಗಿ ಸಾಗುತ್ತ ಬಂದದೆ. ಪ್ರಾಚೀನ ಕಾಲದಲ್ಲಿ ಈ ದೇಶವು ಸಂಪತ್ತು, ವಿದ್ಯೆ, ಪರಾಕ್ರಮ, ಧರ್ಮಾಚರಣೆ ಇವು ಗಳಿಗಾಗಿ ಹೆಸರಾಗಿತ್ತು. ಹಲವು ವಿದ್ಯೆ-ಕಲೆಗಳು ಇಲ್ಲಿಂದಲೆ ಬೇರೆ ಬೇರೆ ದೇಶಗಳಲ್ಲಿ ಹಬ್ಬಿದವು ಈ ದೇಶದಲ್ಲಿ ಆಗಿಹೋದಷ್ಟು ವಿದ್ವಾಂಸರು, ಧರ್ಮ ಸ್ಥಾಪಕರು, ಶಾಸ್ತ್ರಕಾರರು, ಸಾಧುಸಂತರು, ವೀರರು, ಮುತ್ಸದ್ದಿಗಳು ಇನ್ನಾವ ದೇಶದಲ್ಲಿಯೂ ಆಗಿರಲಿಕ್ಕಿಲ್ಲ. ಪರದೇಶದ ಆಘಾತಗಳು ಈ ದೇಶದ ಮೇಲೆ ಎಷ್ಟೋ ಸರತಿ ಆಗಿದ್ದರೂ ಹಿಂದು ಸಂಸ್ಕೃತಿಯು ಹಣಿ ಯದೆ ನಿಂತಿರುವದನ್ನು ವಿಚಾರಿಸಿದರೆ ಸೋಜಿಗವೆನಿಸುವದು.

೩. **ಇತಿಹಾಸ ಜ್ಞಾನದ ಸಾಧನಗಳು:**— ಹಿಂದೀರಾಷ್ಟ್ರವು ಅತಿ ಪ್ರಾಚೀನವಾಗಿರುವದರಿಂದಲೂ ಮಿತಿಯಿಲ್ಲದಷ್ಟು ಆಘಾತಗಳು ಇದರ ಮೇಲೆ ಆಗಿರುವದರಿಂದಲೂ ಈ ದೇಶದ ಇತಿಹಾಸ ಸಾಧನಗಳು ಬಹಳ ಮಟ್ಟಿಗೆ ಮಾಯವಾಗಿದೆ. ಆದರೂ ಶಿಲಾಲೇಖಗಳು, ತಾಮ್ರಪಟಗಳು, ಹಳೆಯ ನಾಣ್ಯಗಳು, ಪುರಾತನಕಾಲದ ಕಟ್ಟಡಗಳು, ವೇದಗಳು, ಪುರಾಣ ಗಳು ಇವುಗಳ ಸಹಾಯದಿಂದ ಹಿಂದಿನ ಕಾಲದ ಇತಿಹಾಸವು ತಕ್ಕಮಟ್ಟಿಗೆ ತಿಳಿಯುವದು.

೪. **ಇತಿಹಾಸ ಸಂಶೋಧನದ ಪ್ರಯತ್ನಗಳು :**— ಇತ್ತೀಚೆಗೆ ಭೂಮಿಯ ಪ್ರಾಚೀನ ಇತಿಹಾಸವನ್ನು ಶೋಧಿಸುವ ಲವಲವಿಕೆಯುಳ್ಳವರು ಪ್ರಾಚೀನ ರಾಷ್ಟ್ರವಾದ ಹಿಂದುದೇಶದ ಇತಿಹಾಸವನ್ನು ಅಭ್ಯಾಸಿಸಹತ್ತಿದರು. ಉಯಿಲ್ಯಮ್ ಜೋನ್ಸ ಎಂಬ ವಿದ್ವಾಂಸನು ಸಂಸ್ಕೃತ ಶಾಕುಂತಲ ನಾಟಕ ವನ್ನು ಇಂಗ್ಲಿಷದಲ್ಲಿ ಭಾಷಾಂತರಿಸಿದಂದಿನಿಂದ ನಮ್ಮ ದೇಶದ ಇತಿಹಾಸ ಸಂಶೋಧನದ ಸಂಬಂಧದಿಂದ ಎಲ್ಲರಲ್ಲಿ ಕುತೂಹಲವು ಉಂಟಾಯಿತು. ಸರಕಾರದವರು ಕ್ರಿ. ಶ. ೧೮೬೧ರಲ್ಲಿ **ಪುರಾಣ ವಸ್ತುಸಂಶೋಧನ ಖಾತೆ** ಯನ್ನು ಸ್ಥಾಪಿಸಿ ಇತಿಹಾಸ ಸಂಶೋಧನ ಕಾರ್ಯವನ್ನು ಸಾಗಿಸಿರುವರು.

ಕ್ಯಾನಿಂಗ್ ಹ್ಯಾಮ್, ಬರ್ಗೆಸ್, ಫ್ಲೀಟ, ಮ್ಯಾಕ್ಸಮುಲರ, ಕೀಲಹಾರ್ನ ಮುಂತಾದ ವಿದೇಶೀಯರೂ ಭಾವೂ ದಾಜೀ, ರಾಜೇಂದ್ರಲಾಲ ಮಿತ್ರ, ಭಾಂಡಾರಕರ, ಗೌರೀಶಂಕರ ಓಝಾ, ರಾಜವಾಡೆ, ಆರ್. ನರಸಿಂಹಾ ಚಾರ್ಯ, ವೆಂಕಟರಾವ ಆಲೂರ, ಶಿಬಲಿ, ನಜೀಬ-ಆಬಾದಿ ಮುಂತಾದ ಹಿಂದೀ ಜನರೂ ಭಾರತ ಇತಿಹಾಸ - ಸಂಶೋಧನ ಕಾರ್ಯದಲ್ಲಿ ಹೆಸರಾಗಿರುವರು.

೫. **ಸಂಶೋಧನದ ಪರಿಣಾಮ**:— ಇತಿಹಾಸ ಸಂಶೋಧಕರು ಮಾಡಿದ ಪ್ರಯತ್ನಗಳಿಂದ ಪ್ರಾಚೀನ-ಅರ್ವಾಚೀನ ಕಾಲಗಳ ಇತಿಹಾಸದ ಸಂಬಂಧದಿಂದ ಎಷ್ಟೋ ಸಂಗತಿಗಳ ಶೋಧವಾಗಿದೆ. ನಾವು ಇದುವರೆಗೆ ನಿಜವೆಂದು ನಂಬುತ್ತಲಿದ್ದ ಹಲವು ಸಂಗತಿಗಳು ತಪ್ಪು ಮತ್ತು ಅತಿಶಯೋಕ್ತಿಯವೆಂದು ಗೊತ್ತಾಗಿದೆ. ಹೀಗೆ ಸಂಶೋಧನದಿಂದ ಗೊತ್ತಾಗುವ ಸುಸಂಗತವಾದ ಇತಿಹಾಸವು ನಮ್ಮ ಮುಂದಿನ ಕಾಲದ ಉತ್ಕರ್ಷಕ್ಕೆ ಕಾರಣವಾಗುವದರಲ್ಲಿ ಸಂಶಯವಿಲ್ಲ.



# ೩ ನೆಯ ಪಾಠ.

## ಮೂಲ ನಿವಾಸಿಗಳೂ ದ್ರವಿಡರೂ.



೧. **ಮೂಲ ನಿವಾಸಿಗಳ ಮೂಲಸ್ಥಾನ:—** "ಎಷ್ಟೋ ಸಾವಿರ ವರ್ಷಗಳ ಮೊದಲು ಹಿಂದುಸ್ಥಾನದ ದಕ್ಷಿಣಕ್ಕಿರುವ ಹಿಂದೀಮಹಾಸಾಗರದಲ್ಲಿ, ಖಂಡಪ್ರಾಯವಾದ ದೊಡ್ಡದೊಂದು ಭೂಪ್ರದೇಶವು **ಆಸ್ಟ್ರೇಲಿಯಾ, ಆಫ್ರಿಕಾಖಂಡಗಳ** ವರೆಗೆ ಹಬ್ಬಿತ್ತು. ಮತ್ತು ಅಲ್ಲಿ ಈಗಿನ ಅಂದಮಾನದ ನಿವಾಸಿಗಳಂಥ, **ನಿಗ್ರೋ** ವರ್ಗಕ್ಕೆ ಸೇರಿದ ಜನರು ವಾಸವಾಗಿದ್ದರು." ಎಂದು ಭೂಗರ್ಭ ಶಾಸ್ತ್ರಜ್ಞರೂ ಇತಿಹಾಸ-ಸಂಶೋಧಕರೂ ಅಭಿಪ್ರಾಯಪಡುವರು. ಆ ಪ್ರದೇಶವು ನೀರಿನಲ್ಲಿ ಮುಳುಗಿ ಹೋಗಿರುವದಂತೆ! ಆ ಕಾಲದ ಗೋರಿ, ಚೀಪುಗಲ್ಲುಗಳ ಆಯುಧ ಮುಂತಾದ ಅವಶೇಷಗಳು ಹಿಂದುಸ್ಥಾನದ ದಕ್ಷಿಣ ಭಾಗದಲ್ಲಿ ಬಹಳವಾಗಿ ದೊರೆತಿರುವವು. ಹಿಂದೀ ಮಹಾಸಾಗರದಲ್ಲಿದ್ದ ಈ ಪ್ರದೇಶಗಳಿಂದಲೇ ನಿಗ್ರೋ ಜನರು ಪ್ರಾಚೀನ ಕಾಲದಲ್ಲಿ ಹಿಂದುಸ್ಥಾನಕ್ಕೆ ಬಂದು ವಾಸವಾಗಿರಬೇಕೆಂದು ತೋರುವದು.

೨. **ನಿಗ್ರಿಟೋ ಜನರು:—** ಕರಾಚಿಯ ಪಶ್ಚಿಮಕ್ಕೆ ಸಮುದ್ರ ದಂಡೆಯಲ್ಲಿಯೂ ಆರಾಕಾನ, ತೇನಾಸರೀಮ, ಸಯಾಮುಗಳಲ್ಲಿಯೂ ಈಗ ವಾಸಿಸಿರುವ **ನಿಗ್ರಿಟೋ** ಎಂಬ ಕಾಡು ಜನರ ಪೂರ್ವಜರೇ ಹಿಂದುಸ್ಥಾನದ ತೀರ ಪ್ರಾಚೀನ ನಿವಾಸಿಗಳೆಂದು ಹೇಳುವರು. ನಿಗ್ರಿಟೋ ಜನರು ಗಿಡ್ಡರೂ ಕಪ್ಪು ಬಣ್ಣದವರೂ ಆಗಿದ್ದು ಮೀನ ಹಿಡಿಯುವ ಉದ್ಯೋಗವನ್ನೇ ಬಹುಕಾಲದಿಂದ ಮಾಡುತ್ತ ಬಂದಿರುವರು. ಇವರ ಪೂರ್ವಜರಾದ ಮೂಲ ನಿವಾಸಿಗಳಿಗೆ ಧಾತುಗಳನ್ನು ಉಪಯೋಗಿಸುವದು ಗೊತ್ತಿರಲಿಲ್ಲ; ಅವರು ಚೂಪಾದ ಕಲ್ಲುಗಳ ಆಯುಧಗಳಿಂದಲೇ ಬೇಟೆಯಾಡಿ ಉಪಜೀವಿಸುತ್ತಿದ್ದರು.

**೩. ಸಂತಾಳ – ಕೋಳ – ಗೋಂಡರು :—** ನಿಗ್ರಿಟೋ ಜನರ ತರುವಾಯ ಹಿಂದುಸ್ಥಾನದ ಈಶಾನ್ಯ ಮಾರ್ಗವಾಗಿ ಬ್ರಹ್ಮಪುತ್ರೆಯ ಕೊಳ್ಳದಗುಂಟ ಬಂದು ಇಲ್ಲಿ ನೆಲೆಸಿದವರು **ಮೋಂಗೋಲಿಯನ್** ಮತ್ತು **ಕೋಲೇರಿಯನ್** ಜನರು. ಇವರು ನಿಗ್ರಿಟೋ ಜನರಿಗಿಂತ ಹೆಚ್ಚು ಸುಧಾರಿಸಿದವರು; ಕಲ್ಲಿನ ಸುತ್ತಿಗೆ, ಮಣ್ಣಿನ ಪಾತ್ರೆ ಇವುಗಳನ್ನು ಉಪಯೋಗಿಸುವರು; ಶತ್ರುಗಳೊಡನೆ ಕಾದುವಾಗ ಕವಣೆಗಳನ್ನು ಹೊಡೆಯುವರು. ಮಧ್ಯಹಿಂದುಸ್ಥಾನ, ಒಡಿಸಾ, ಛೋಟಾನಾಗಪೂರ ಪ್ರಾಂತಗಳ ಅರಣ್ಯಗಳಲ್ಲಿ ಇರುವ ಈಗಿನ **ಸಂತಾಳ, ಕೋಳ, ಗೋಂಡ** ಮುಂತಾದ ಕಾಡುಜನರು ಈ ಮೋಂಗೋಲಿಯನ್, ಕೋಲೇರಿಯನ್ ನಿವಾಸಿಗಳ ವಂಶಜರೇ ಆಗಿರುವರು. ಮೊದಲು ಇವರು ಹೊಳೆಗಳ ದಂಡೆಗುಂಟ ನೆಲೆಸಿದ್ದರು. ಆದರೆ ಇವರ ತರುವಾಯ ಬಂದವರು ಇವರನ್ನು ಕಾಡುಗಳಿಗೆ ಅಟ್ಟಿದರು. ಈ ಹೊಸ ಜನರಿಗೆ ತಾಮ್ರ ಮುಂತಾದ ಧಾತುಗಳ ಉಪಯೋಗವು ಗೊತ್ತಿತ್ತು. ಆದದರಿಂದ ಇವರಿಗೆ **ತಾಮ್ರಯುಗೀನ**ರೆಂಬ ಹೆಸರುಂಟಾಯಿತು. ಇವರು ಸಿಂಧು, ಗಂಗಾ ಮುಂತಾದ ಹೊಳೆಗಳ ದಂಡೆಗುಂಟ ವಾಸಿಸಿದ್ದರು. ಇವರು ದಕ್ಷಿಣ ಹಿಂದುಸ್ಥಾನವನ್ನು ಪ್ರವೇಶಿಸಲಿಲ್ಲ.

**೪. ದ್ರವಿಡರು :—** ತಾಮ್ರಯುಗೀನರ ತರುವಾಯ ಅಂದರೆ ಕ್ರಿ. ಶಕಕ್ಕೆ ಮುಂಚೆ ಸುಮಾರು ಐದು ಸಾವಿರ ವರ್ಷಗಳ ಪೂರ್ವದಲ್ಲಿ **ದ್ರವಿಡ**ರೆಂಬ ಜನರು ಹಿಂದುಸ್ಥಾನದ ವಾಯವ್ಯ ಮಾರ್ಗವಾಗಿ * ಈ ದೇಶಕ್ಕೆ ಬಂದರು. ಇವರು ಹಿಂದಿನವರಿಗಿಂತ ಹೆಚ್ಚು ಸುಧಾರಣೆಯನ್ನು ಹೊಂದಿದ್ದರು. ಕಲ್ಲುಗಳಿಂದಲೂ ಧಾತುಗಳಿಂದಲೂ ಸುಂದರವಾದ ಒಡವೆಗಳನ್ನು ಮಾಡುವದು, ಕಲ್ಲುಬಂಡೆಗಳಿಂದ ಮನೆಗಳನ್ನೂ ಕೋಟೆಗಳನ್ನೂ ಕಟ್ಟುವದು, ಬಲುಚಿಸ್ಥಾನದಲ್ಲಿರುವಾಗಲೇ ಈ ಕಲೆಗಳನ್ನು ಇವರು ಅರಿತಿದ್ದರೆಂದು ತೋರುತ್ತದೆ. ಯುರೋಪ – ಏಶಿಯ ಖಂಡಗಳ ಗಡಿ

* ದ್ರವಿಡರು ಹಿಂದೀ ಮಹಾಸಾಗರದಲ್ಲಿದ್ದ ಪ್ರದೇಶಗಳಿಂದ ಹಿಂದುಸ್ಥಾನಕ್ಕೆ ಬಂದರೆಂದೂ ಅವರು ಒಳ್ಳೆಯ ಸುಧಾರಣೆಯನ್ನು ಹೊಂದಿ ಬಲುಚಿಸ್ಥಾನದ ವರೆಗೆ ಸಹ ಒಂದು ಕಾಲದಲ್ಲಿ ಹಬ್ಬಿದ್ದರೆಂದೂ ಕೆಲವರು ಅಭಿಪ್ರಾಯ ಪಡುವರು.

ಸೀಮೆಯು ಈ ದ್ರವಿಡರ ಮೂಲ ಸ್ಥಾನವಿರಬೇಕೆಂದು ತಿಳಿಯುವದು. ಇವರು ಇಡೀ ದೇಶದಲ್ಲಿ ಹಳ್ಳಿ ಪಟ್ಟಣಗಳನ್ನು ಕಟ್ಟಿಕೊಂಡು ಒಕ್ಕಲತನವನ್ನೂ ಪಶುಪಾಲನೆಯನ್ನೂ ಮಾಡಿಕೊಂಡಿದ್ದರು. ಆಚಾರ-ವಿಚಾರಗಳೂ ಭಾಷೆಯೂ ತಕ್ಕಮಟ್ಟಿಗೆ ಸುಧಾರಿಸಿದ್ದವು. ಉತ್ತಮವಾದ ನೂಲಿನ ವಸ್ತ್ರಗಳು ಬಳಕೆಯಲ್ಲಿದ್ದವು. ಈಗ ದ್ರವಿಡರ ವಸತಿಯು ವಿಶೇಷವಾಗಿ ದಕ್ಷಿಣ ಹಿಂದುಸ್ಥಾನದ ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಇರುವದು. **ತಮಿಳ, ತೆಲಗು, ಕನ್ನಡ, ತುಳು** ಮತ್ತು **ಮಲಿಯಾಳ** ಇವು ದ್ರವಿಡವರ್ಗದ ಭಾಷೆಗಳಾಗಿವೆ.

ದ್ರವಿಡರ ತರುವಾಯ ಬಂದ ಆರ್ಯರು ದ್ರವಿಡರಿಗಿಂತ ಹೆಚ್ಚು ಸುಧಾರಿಸಿದವರೂ ಬುದ್ಧಿವಂತರೂ ಆದದರಿಂದ ಆರ್ಯರ ಮುಂದೆ ಇವರ ಆಟವು ಸಾಗಲಿಲ್ಲ. ಆರ್ಯರು ಹಿಂದುಸ್ಥಾನದ ಎಲ್ಲ ಭಾಗಗಳನ್ನು ವ್ಯಾಪಿಸುತ್ತ ನಡೆದಂತೆ ದ್ರವಿಡರು ಕೆಳಕೆಳಗೆ ದಕ್ಷಿಣಕ್ಕೆ ಸರಿಯಹತ್ತಿದರು. ಆದರೂ ದ್ರವಿಡರ ಸಂಸರ್ಗದಿಂದ ಆರ್ಯರ ಧರ್ಮ, ಆಚಾರ, ವಿಚಾರ ಇವುಗಳ ಮೇಲೆ ದ್ರವಿಡ-ಸಂಸ್ಕೃತಿಯ ಪರಿಣಾಮವು ಆಗದೆ ಇರಲಿಲ್ಲ. ಇಷ್ಟೇ ಅಲ್ಲ; ಕಾಲಾಂತರದಿಂದ ದ್ರವಿಡ-ಆರ್ಯರ ಸಂಮಿಶ್ರಣವೂ ಆಯಿತು.

---

# ೪ನೆಯ ಪಾಠ.

## ಆರ್ಯರು.

(ಕ್ರಿ. ಶ. ಪೂ. ೨೦೦೦ ದಿಂದ ಕ್ರಿ. ಶ. ಪೂ. ೧೪೦೦)



೧. **ಆರ್ಯರ ಪ್ರವೇಶ**:— ದ್ರವಿಡರ ತರುವಾಯ ಬಹು ಕಾಲದ ಮೇಲೆ ಮಧ್ಯಏಶಿಯದಿಂದ ಗೌರವರ್ಣದವರೂ, ಹೆಚ್ಚು ನಿಲುವಿಕೆಯವರೂ ಬುದ್ಧಿಶಾಲಿಗಳೂ ಆದ ಜನರು ಹಿಂದುಸ್ಥಾನದ ವಾಯವ್ಯ ಮಾರ್ಗವಾಗಿ ಬಂದು ಪಂಜಾಬ ಪ್ರಾಂತದಲ್ಲಿ ಒಕ್ಕಲಾಗಿ ನಿಂತರು. ಇವರೇ

* **ಆರ್ಯರು.** ಆರ್ಯರು ಗುಂಪು ಗುಂಪಾಗಿ ತಮ್ಮ ದನಕರುಗಳ ಹಿಂಡುಗಳೊಡನೆ ಪಂಜಾಬಕ್ಕೆ ಬಂದರು. ಮುಂದೆ ಅವರು ಕ್ರಮದಿಂದ ಗಂಗಾ-ಯಮುನೆಗಳ ದಂಡೆಗುಂಟ ಆಗ್ನೇಯಕ್ಕೆ ಸಾಗುತ್ತ, ಬೆಳೆಯುಳ್ಳ ಭೂಮಿಗಳನ್ನೂ ಇರಲು ಅನುಕೂಲವಾದ ಸ್ಥಳಗಳನ್ನೂ ನೋಡಿಕೊಂಡು ಅಲ್ಲಲ್ಲಿ ಒಕ್ಕಲಾಗಿ ನಿಂತರು.

೨. **ಆರ್ಯರು ಅನಾರ್ಯರನ್ನೂ ದ್ರವಿಡರನ್ನೂ ಹಿಂದಕ್ಕಟ್ಟಿದ್ದು:–** ಈ ದೇಶದ ಆರೋಗ್ಯವಾದ ಹವೆ, ಬೆಳೆಯುಳ್ಳ ಭೂಮಿ, ನೀರಿನ ವಿಪುಲತೆ, ಮನೋಹರವಾದ ಸೃಷ್ಟಿಸೌಂದರ್ಯ ಇವುಗಳಿಂದ ಆರ್ಯರಿಗೆ ಇಲ್ಲಿ ಸ್ಥಿರವಾಗಿ ನೆಲೆಗೊಳ್ಳಲು ಉತ್ಸಾಹವೆನಿಸಿತು. ಒಕ್ಕಲತನ, ಪಶುಪಾಲನೆ, ನೆಯಿಗೆ ಈ ಉದ್ಯೋಗಗಳಿಂದ ಉಪಜೀವನವು ಉತ್ತಮವಾಗಿ ಸಾಗ ಹತ್ತಿತು. ಆರ್ಯರು ಇಲ್ಲಿ ವಾಸವಾಗಿದ್ದ ಮೂಲ ನಿವಾಸಿಗಳ ಸಂಗಡಲೂ ದ್ರವಿಡರ ಸಂಗಡಲೂ ಕಾದಿ, ಯುಕ್ತಿ ಪ್ರಯುಕ್ತಿಗಳಿಂದ ಅವರಿಂದಾಗುವ ಉಪದ್ರವವನ್ನು ತಪ್ಪಿಸಿ ಅವರನ್ನು ಹಿಂದಕ್ಕಟ್ಟಿದರು. ಕಾಡು ಜನರು ಅರಣ್ಯಗಳನ್ನು ಸೇರಿ ಅಲ್ಲಿಯೇ ಇರಹತ್ತಿದರು. ದ್ರವಿಡರು ದಕ್ಷಿಣಕ್ಕೆ ಹಿಮ್ಮೆಟ್ಟಿದರು.

೩. **ಆರ್ಯರ ಧರ್ಮಸುಧಾರಣೆ.—** ಈ ರೀತಿ ನಿಶ್ಚಿಂತರಾಗಿ ಇರಹತ್ತಿದ ಬಳಿಕ ಆರ್ಯರು ಕ್ರಮದಿಂದ ವಿದ್ಯೆಕಲೆಗಳಲ್ಲಿ ಪ್ರಗತಿಯನ್ನು ಹೊಂದಿದರು. ಸೃಷ್ಟಿಕರ್ತನಾದ ದೇವರನ್ನು ಭಕ್ತಿಯಿಂದ ಸ್ತುತಿಸುವ ಮಂತ್ರಗಳನ್ನು ರಚಿಸಿದರು. ಯಜ್ಞಯಾಗಾದಿ ಕರ್ಮಗಳನ್ನು ಮಾಡಹತ್ತಿದರು. ಇವರ ಭಾಷೆಯು **ಸಂಸ್ಕೃತವು.** ಸಂಸ್ಕೃತ ಸೂಕ್ತ

---

* "ಆರ್ಯ" ಎಂಬದರ ಅರ್ಥವು "ಬೇಸಾಯುಗಾರ" ಮತ್ತು "ಸುಧಾರಿಸಿದವ" ಎಂದು ಎರಡು ವಿಧವಾಗಿ ರೂಢವಾಗಿದೆ. ಮೂಲ ನಿವಾಸಿಗಳು ಒಕ್ಕಲತನ ಮಾಡದೆ ಬೇಟೆಯಿಂದಲೇ ಜೀವಿಸುತ್ತಿದ್ದರು. ಮತ್ತು ಪಶುವೃತ್ತಿಗಿಂತ ಹೆಚ್ಚಿನ ಸುಧಾರಣೆಯೂ ಇವರಲ್ಲಿ ಆಗಿರಲಿಲ್ಲ. ಆದದರಿಂದ ಮೂಲ ನಿವಾಸಿಗಳಿಗೆ "ಅನಾರ್ಯ" ಎಂಬ ಹೆಸರು ಬಂದಿತು. ಆರ್ಯರ ಮೂಲ ಸ್ಥಾನವು ಉತ್ತರ ಧ್ರುವಪ್ರದೇಶವೆಂದು ಲೋ. ಟಿಳಕರವರು ನಿರ್ಣಯಿಸಿರುವರು.

ಗಳನ್ನು ಪಾಠಮಾಡಿ ಪರಂಪರೆಯಿಂದ ನೆನಪಿಡುತ್ತಿದ್ದರು. ಸೂಕ್ತಗಳಿಗೆ **ಶ್ರುತಿ**ಗಳೆಂದೂ ಹೆಸರು. 'ಶ್ರುತ' ಎಂದರೆ ಕೇಳಿದ್ದು ಎಂಬರ್ಥ. ಮುಂದೆ ಈ ಬೇರೆ ಬೇರೆ ಸೂಕ್ತಗಳನ್ನು ಒಟ್ಟುಗೂಡಿಸಿ ಬರೆದ ಗ್ರಂಥವು **ಋಗ್ವೇದಸಂಹಿತೆ** ಎಂಬ ಹೆಸರುಗೊಂಡಿತು. ಈ * ಋಗ್ವೇದವು ಆರ್ಯರ ಅತಿ ಪ್ರಾಚೀನ ಗ್ರಂಥವು. ಇದರಿಂದ ಆರ್ಯರ ಬುದ್ಧಿವೈಭವವು ಚೆನ್ನಾಗಿ ವ್ಯಕ್ತವಾಗುತ್ತದೆ.

೪. **ಚಾತುರ್ವರ್ಣ್ಯ**:— ಆರ್ಯರು ಪಂಜಾಬ ಪ್ರಾಂತದಿಂದ ದಕ್ಷಿಣಕ್ಕೆ ಸಾಗಿದ ಬಳಿಕ ತಮಗೆ ಅಡ್ಡಿಮಾಡಿದ ಶತ್ರುಗಳ ಕೂಡ ಅವರು ಯುದ್ಧಕಲೆಯನ್ನು ಅರಿತುಕೊಂಡರು. ಶತ್ರುಗಳನ್ನು ಸೋಲಿಸಿದ ನಂತರ ಸಂರಕ್ಷಣೆ ಮತ್ತು ಸುವ್ಯವಸ್ಥೆ ಇವುಗಳ ಉದ್ದೇಶದಿಂದ ರಾಜ್ಯಗಳನ್ನು ಸ್ಥಾಪಿಸಿದರು. ಯುದ್ಧಕಲೆ, ರಾಜ್ಯಭಾರಗಳನ್ನು ವಹಿಸಿ ಕೆಲವರು ಅವನ್ನು ಅಭ್ಯಾಸಿಸಹತ್ತಿದರು. ಇವರು **ಕ್ಷತ್ರಿಯ**ರೆನಿಸಿದರು. ವ್ಯಾಪಾರ, ಉದ್ಯೋಗ, ಒಕ್ಕಲತನ ಮುಂತಾದ ಸಮಾಜದ ಪೋಷಣೆಗೆ ಅಗತ್ಯವಾದ ಕೆಲಸಗಳನ್ನು ಕೆಲವರು ಕೈಕೊಂಡರು; ಇವರೇ **ವೈಶ್ಯ**ರೆನಿಸಿದರು. ವೇದಾಭ್ಯಾಸ, ಧರ್ಮಕಾರ್ಯ, ದೇವತೋಪಾಸನೆ ಇಂಥ ಕೆಲಸಗಳಲ್ಲಿ ಮಗ್ನರಾಗಿ ಕೆಲವರು ಇರಹತ್ತಿದರು; ಇವರು **ಬ್ರಾಹ್ಮಣ**ರೆನಿಸಿದರು. ಸೋತ ಅನಾರ್ಯರಲ್ಲಿ ಒಪ್ಪಿಕೊಂಡವರನ್ನು ಆರ್ಯರು ತಮ್ಮ ಹತ್ತರ ಇರಿಸಿಕೊಂಡು, ಅವರಿಂದ ಕೂಲಿ, ಕುಂಬಳಿ ಮುಂತಾದ ಕೆಲಸಗಳನ್ನು ಮಾಡಿಸಿಕೊಳ್ಳಹತ್ತಿದರು. ಆರ್ಯರನ್ನು ನಂಬಿಕೊಂಡು ಇದ್ದು ತಮ್ಮ ಉಪಜೀವನವನ್ನು ಸಾಗಿಸುತ್ತಿರಹತ್ತಿದ

---

* ಋಗ್ವೇದದಲ್ಲಿ ಹತ್ತು ಮಂಡಲಗಳೂ ೧೦೨೮ ಸೂಕ್ತಗಳೂ ಇವೆ. ಇದರಲ್ಲಿ ದೇವತೆಗಳ ಒಡೆಯನಾದ ಇಂದ್ರನ ಪರಾಕ್ರಮದ ವರ್ಣನೆಯುಂಟು. ಮತ್ತು ಇಂದ್ರಾದಿ ದೇವತೆಗಳನ್ನು ಕುರಿತು– "ಶತ್ರುಗಳ ನಾಶವಾಗಲಿ; ಸತ್ತವರಿಗೆ ಸದ್ಗತಿಯಾಗಲಿ; ಮದುಮಗಳು ಸುಪುತ್ರನನ್ನು ಪಡೆಯಲಿ; ಪಾಪಗಳು ನಶಿಸಲಿ; ಸುಬುದ್ಧಿಯು ಹುಟ್ಟಲಿ; ಭೂಮಿಯಲ್ಲಿ ಸಮೃದ್ಧವಾದ ಬೆಳೆಗಳು ಬೆಳೆಯಲಿ; ಸಂಪತ್ತು ಉಂಟಾಗಲಿ" ಇವೇ ಮುಂತಾದ ಉದ್ದೇಶಗಳಿಂದ ಪ್ರಾರ್ಥಿಸಿರುವದುಂಟು. ಋಗ್ವೇದವು ಕ್ರಿ. ಶ. ಮುಂಚೆ ೧೫೦೦-೧೦೦೦ ವರೆಗಿನ ಕಾಲದಲ್ಲಿ ಗ್ರಂಥರೂಪವನ್ನು ಹೊಂದಿರಬೇಕೆಂದು ಅನುಮಾನವದೆ.

ಈ ಅನಾರ್ಯರೇ '**ಶೂದ್ರ**' ಎಂಬ ಹೆಸರನ್ನು ಪಡೆದರು. ಹೀಗೆ ಚಾತುರ್ವರ್ಣ್ಯ ಪದ್ಧತಿಯು ನೆಲೆಗೊಂಡಿತು.

**೫. ಸಾಮಾಜಿಕ ಸ್ಥಿತಿ :—** ಆರಂಭದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರಲ್ಲಿ ಶ್ರೇಷ್ಠ-ಕನಿಷ್ಠ ಭಾವನೆಯು ಇದ್ದಿರಲಿಲ್ಲ. ಅನುಕೂಲತೆಗೆಂದು ಒಂದೊಂದು ಸಮೂಹದವರು ಒಂದೊಂದು ಉದ್ಯೋಗವನ್ನು ಮಾಡುತ್ತಿದ್ದರು. ಪ್ರೌಢ ವಿವಾಹವು ಬಳಕೆಯಲ್ಲಿತ್ತು. ಸ್ತ್ರೀಯರು ವಿದ್ಯಾವತಿಯರಿದ್ದರು. ಯಜ್ಞಕಾಲದಲ್ಲಿ ವಿದ್ವಾಂಸರು ಒತ್ತಟ್ಟಿಗೆ ಕಲೆತು ಗಹನವಾದ ವಿಷಯಗಳನ್ನು ಚರ್ಚಿಸುವರು. ಆಗ ಸ್ತ್ರೀಯರು ಸಹ ನಿರ್ಭಯರಾಗಿ ಚರ್ಚೆಮಾಡುವರು.

ಆರ್ಯರು ಒಕ್ಕಲತನದ ಕಡೆಗೆ ವಿಶೇಷ ಲಕ್ಷ್ಯಕೊಡುತ್ತಿದ್ದರು. ಕೆರೆ-ಕಾಲುವೆಗಳನ್ನು ಕಟ್ಟಿಸಿದ್ದರು. ದನಕರುಗಳನ್ನು ಸಂಪತ್ತೆಂದು ಭಾವಿಸಿದ್ದರು. ಕುದುರೆಗಳನ್ನು ಉಪಯೋಗಿಸುತ್ತಿದ್ದರು. ಸಮುದ್ರ ಪ್ರವಾಸವನ್ನು ಮಾಡುತ್ತಿದ್ದರು. ಬೆಳ್ಳಿ–ಬಂಗಾರದ ವಸ್ತುಗಳನ್ನು ಧರಿಸುತ್ತಿದ್ದರು. ನಿಷ್ಕವೆಂಬ ಬಂಗಾರದ ನಾಣ್ಯವು ಬಳಕೆಯಲ್ಲಿತ್ತು.

**೬. ಆಶ್ರಮ ವ್ಯವಸ್ಥೆ** :— ಆರ್ಯರು, ಮನುಷ್ಯನ ಆಯುಷ್ಯದಲ್ಲಿ ನಾಲ್ಕು ಭಾಗಗಳನ್ನು ಕಲ್ಪಿಸಿ, ಆ ಕಾಲಗಳಲ್ಲಿ ಅವನು ಮಾಡತಕ್ಕ ಕರ್ತವ್ಯಗಳನ್ನು ಗೊತ್ತುಮಾಡಿದ್ದರು. ಇದಕ್ಕೆ ಆಶ್ರಮವ್ಯವಸ್ಥೆ ಎಂಬ ಹೆಸರು. **ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ** ಇವು ನಾಲ್ಕು ಆಶ್ರಮಗಳು.

**ಬ್ರಹ್ಮಚರ್ಯ**:— ಎಂಟನೆಯ ವರುಷ ಉಪನಯನವಾದ ಕೂಡಲೆ ಗುರುವಿನಲ್ಲಿಯೆ ಇದ್ದು, ಇಪ್ಪತ್ತು ಇಪ್ಪತ್ತೆರಡು ವರ್ಷದವನಾಗುವ ವರೆಗೆ ವಿದ್ಯಾಭ್ಯಾಸ ಹಾಗು ಗುರುಸೇವೆಯನ್ನು ಮಾಡುವದು.

**ಗೃಹಸ್ಥ** :— ಪ್ರಪಂಚಿಕನಾಗಿ, ಸುಮಾರ್ಗದಿಂದ ದ್ರವ್ಯವನ್ನು ಸಂಪಾದಿಸಿ ಕುಟುಂಬವನ್ನು ಸಂರಕ್ಷಿಸುವದು; ಸಮಾಜದ ಹಿತದ ಕಾರ್ಯಗಳಿಗೆ ನೆರವಾಗುವದು.

**ವಾನಪ್ರಸ್ಥ** :— ಪ್ರಪಂಚದ ಮೋಹವು ಕಡಿಮೆಯಾಗಬೇಕೆಂದು ಕೆಲಕಾಲ ಅರಣ್ಯದಲ್ಲಿದ್ದು ಕಂದಮೂಲಗಳನ್ನು ಸೇವಿಸುತ್ತ ಚಿತ್ತಶುದ್ಧಿಯನ್ನು ಪಡೆಯುವದು.

**ಸನ್ಯಾಸ** :— ಸ್ವಂತದ ಅಭಿಲಾಷೆಯನ್ನು ತ್ಯಜಿಸಿ, ಕರ್ತವ್ಯವೆಂದು ಜಗತ್ಕಲ್ಯಾಣದ ಕಾರ್ಯಗಳನ್ನು ಮಾಡುತ್ತ, ಪರಮಾತ್ಮ ಚಿಂತನೆಯಲ್ಲಿ ನಿರತನಾಗಿದ್ದು ಸದ್ಗತಿಯನ್ನು ಪಡೆಯುವದು.

೭. **ಪರಮಾತ್ಮನ ಸಂಬಂಧದ ವಿಚಾರ** :— ಆರ್ಯರ ಧರ್ಮವು ಮನೋಹರವಾದದ್ದು. ಆ ಕಾಲದ ಎಲ್ಲ ಜನರ ಮೇಲೆ ಅವರ ಸುಪರಿಣಾಮವಾಗಿ ಅವರು ಅದನ್ನು ಸ್ವೀಕರಿಸಿದರು. ಪಂಚಮಹಾಭೂತಗಳ ನಿಜ ಸ್ವರೂಪವೂ ಅವುಗಳ ಕಾರ್ಯಕಾರಣಭಾವವೂ ಗೊತ್ತಾಗುವ ಮೊದಲೇ ಅವುಗಳ ವಿಷಯವಾಗಿ ಆರ್ಯರಲ್ಲಿ ದೈವೀಭಾವನೆಯು ಉಂಟಾಯಿತು. ಈ ಶಕ್ತಿಗಳನ್ನು ಭಕ್ತಿಯಿಂದ ನಮಿಸಿ, ಪ್ರಸಂಗದಲ್ಲಿ ಅವುಗಳನ್ನು ಪ್ರಾರ್ಥಿಸುವರು. ಯಮ, ಯಮಲೋಕ ಇವುಗಳ ಸಂಬಂಧವಾಗಿ ಅವರಲ್ಲ ವಿಶ್ವಾಸವಿತ್ತು. ಪುನರ್ಜನ್ಮವು ಉಂಟೆಂದು ಅವರು ತಿಳಿದಿದ್ದರು. 'ದೇಹವು ನಾಶಹೊಂದಿದರೂ ಆತ್ಮನು ಅಮರನು ಎಂದರೆ ಅವನಿಗೆ ನಾಶವಿಲ್ಲ.' ಎಂದು ಅವರು ದೃಢವಾಗಿ ನಂಬಿದ್ದರು. ಇಂದ್ರಾದಿ ಅನೇಕ ದೇವತೆಗಳನ್ನು ಪ್ರಾರ್ಥಿಸುವರಾದರೂ ಜಗತ್ಕಾರಣನಾದ ಪರಮಾತ್ಮನು ಒಬ್ಬನೇ ಎಂಬುದನ್ನು ಅವರು ತಿಳಿದಿದ್ದರು. ಸೃಷ್ಟಿಶಕ್ತಿಗಳನ್ನು ಪರಮಾತ್ಮನ ಸ್ವರೂಪಗಳೆಂದು ಭಾವಿಸಿದ್ದರು.

೮ * **ಆರ್ಯರ ಯೋಗ್ಯತೆ** :— ಆರ್ಯರ ತರುವಾಯ ಅನೇಕ ಜನಾಂಗದವರು ಹಿಂದುಸ್ಥಾನವನ್ನು ಪ್ರವೇಶಿಸಿದರು. ಆದರೆ ಅವರ ಹಾಗೆ

---

* ಆರ್ಯರು ಅನಾರ್ಯ [ ಮೂಲ ನಿವಾಸಿ ] ರನ್ನು ನಾಶಗೊಳಿಸದೆ ಅವರನ್ನು ತಮ್ಮ ಸಮಾಜ ಸಂಸ್ಥೆಯಲ್ಲಿ ಸೇರಿಸಿಕೊಂಡುದು, ಆರ್ಯರ ದೊಡ್ಡ ಮನಸ್ಸಿನ ಸಾಕ್ಷಿಯಾಗಿದೆ. ಏಕೆಂದರೆ ೧೭ನೆಯ ಶತಮಾನದಲ್ಲಿ ಅಮೇರಿಕಾ ಖಂಡಕ್ಕೂ ೧೮ನೆಯ ಶತಮಾನದಲ್ಲಿ ಆಫ್ರಿಕಾ ಖಂಡಕ್ಕೂ ಹೋಗಿ ವಸಾಹತು ಮಾಡಿದ ಪಾಶ್ಚಾತ್ಯರು ಅಲ್ಲಿಯ ಮೂಲ ನಿವಾಸಿಗಳಾದ ಕೆಂದು ಇಂಡಿಯನ್ ಮತ್ತು ನಿಗ್ರೋ ಜನರನ್ನು ನಿರ್ದಯತನದಿಂದ ನಾಶಗೊಳಿಸಿದರು. ಈಗ ಮುನ್ನೂರು ವರ್ಷಗಳಾದ ಮೇಲೆಯೂ, ಆ ಜನರು ಕ್ರಿಸ್ತೀ ಧರ್ಮವನ್ನು ಸ್ವೀಕರಿಸಿದ್ದರೂ ಅವರಿಗೆ ಕ್ರಿಸ್ತೀ ಸಮಾಜದಲ್ಲಿ ಸಮಾನತೆಯ ಅಧಿಕಾರವು ದೊರೆಯುವದಿಲ್ಲ.

ಹಿಂದುಸ್ಥಾನದ ಮೇಲೆ ಮತ್ತಾರೂ ತಮ್ಮ ವರ್ಚಸ್ಸನ್ನು ನೆಲೆಗೊಳಿಸ ಲಿಲ್ಲ. ಆರ್ಯರು ಎಲ್ಲ ಬಗೆಯಿಂದ ಉಳಿದವರೆಲ್ಲರಿಗಿಂತ ಸುಧಾರಣೆಯಲ್ಲಿ ಮುಂದುವರಿದಿದ್ದರು. ಅತ್ತ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯ ಜನರು ತೊಗಲು ಗಳನ್ನೇ ಹೊದ್ದುಕೊಳ್ಳುವಂಥ ಕಾಡುಸ್ಥಿತಿಯಲ್ಲಿರುವಾಗ ಇತ್ತ ಆರ್ಯರು ನಾಗರಿಕರಾಗಿ ಸಿರಿಸಂಪತ್ತುಗಳಿಂದ ಕೂಡಿಕೊಂಡು ವೈಭವದಿಂದ ಬಾಳುವೆ ಮಾಡುತ್ತಿದ್ದರು.

## ೫ ನೆಯ ಪಾಠ.

### ಆರ್ಯರು. (ಮುಂದೆ ಸಾಗಿದೆ)

( ಕ್ರಿ. ಶ ಪೂ. ೧೪೦೦ ರಿಂದ ಕ್ರಿ. ಶ. ಪೂ. ೮೦೦ )



೧. **ರಾಜ್ಯಸ್ಥಾಪನೆ:—** ಆರ್ಯರು ಗಂಗಾ ಯಮುನೆಗಳ ದಂಡೆಯ ಪ್ರದೇಶದಲ್ಲಿ ನೆಲೆಗೊಂಡ ತರುವಾಯ, **ಕುರು** ವಂಶದವರು **ಹಸ್ತಿನಾವತಿ** ಯಲ್ಲಿಯೂ **ಕೋಸಲರು ಅಯೋಧ್ಯೆ**ಯಲ್ಲಿಯೂ **ಪಾಂಚಾಲರು ಕಾಂಪಿಲ್ಯ** ದಲ್ಲಿಯೂ **ವಿದೇಹರು ಬಿಹಾರ** ಪ್ರಾಂತದಲ್ಲಿಯೂ ತಮ್ಮ ತಮ್ಮ ರಾಜ್ಯಗಳನ್ನು ಸ್ಥಾಪಿಸಿದರು. ರಾಜಸತ್ತೆಯು ನೆಲೆಗೊಂಡಿತು. ಆದರೂ ಅರಸರು ಜನರ ಅನುಮತಿಯಂತೆ ನಡೆಯುತ್ತಿದ್ದರು. ಅರಸರಿಂದ ವಿದ್ವಾಂಸರಿಗೆ ಆಶ್ರಯವು ದೊರೆಯಹತ್ತಿತು. ಧರ್ಮ, ರಾಜಕಾರಣ, ಯುದ್ಧ, ಉಳಿದ ವ್ಯವಹಾರ ಇವುಗಳ ಸಂಬಂಧದ ನಿಯಮಗಳು ಉಂಟಾದವು. ದೇವತೆಗಳ ಸಂತುಷ್ಟತೆ ಗಾಗಿ ಯಜ್ಞಯಾಗಾದಿಗಳನ್ನು ಮಾಡಹತ್ತಿದರು. ಶರಣಾಗತರನ್ನೂ ಹೆಂಗಸ ರನ್ನೂ ಹುಡುಗರನ್ನೂ ರಕ್ಷಿಸುವದು ಪ್ರತಿಯೊಬ್ಬನ ಕರ್ತವ್ಯವೆಂದು ಆರ್ಯರ ಗ್ರಹಿಕೆಯಿದ್ದಿತು.

೨. **ವೇದಗಳು:—** ಗಂಗಾತೀರದ ಆರ್ಯರು ಪಂಜಾಬದಲ್ಲಿಯ ಆರ್ಯರಿಗಿಂತ ಹೆಚ್ಚು ಸುಧಾರಿಸಿದ್ದರು. ಇವರ ರಾಜ್ಯಗಳು ವಿಸ್ತಾರವಾಗಿ ದ್ದವು. ಯಜ್ಞಸಮಾರಂಭಗಳನ್ನು, ಇವರು ಒಳ್ಳೆಯ ಸಡಗರದಿಂದ ಜರಗಿಸು

ವರು. ಯಜ್ಞಸಂಬಂಧವಾದ ನಿಯಮಗಳನ್ನು ತಿಳಿಸುವ ಗ್ರಂಥವು **ಯಜು-ರ್ವೇದವು.** ಗೀತರೂಪವಾಗಿ ಅನ್ನತಕ್ಕ ಸೂಕ್ತಗಳ ಸಂಗ್ರಹವು **ಸಾಮವೇದವು.** ಮತ್ತು ಉಳಿದ ಮಂತ್ರ ತಂತ್ರ ವ್ಯವಹಾರ ಸಂಬಂಧದ ಸೂಕ್ತಗಳ ಗ್ರಂಥವು **ಅಥರ್ವವೇದವು.** ಹೀಗೆ ಮೂಲ ಋಗ್ವೇದದ ಜೊತೆಗೆ ಯಜುರ್ವೇದ, ಸಾಮವೇದ, ಅಥರ್ವವೇದ ಇವು ಉಂಟಾದವು. 'ವೇದಗಳು ಅಪೌರುಷೇಯಗಳು, ಎಂದರೆ, ಅವು ಮನುಷ್ಯರಿಂದ ಸಿದ್ಧವಾದವುಗಳಲ್ಲ;' ಎಂದು ಹಿಂದುಗಳು ನಂಬುವರು.

೩. **ಬ್ರಾಹ್ಮಣಗಳು** :— ವೇದಗಳ ತರುವಾಯ ಬ್ರಾಹ್ಮಣಗಳೆಂಬ ಗ್ರಂಥಗಳು ಉಂಟಾದವು. ಈ ಬ್ರಾಹ್ಮಣಗಳು ಯಜ್ಞಕಾರ್ಯಗಳನ್ನೂ ಅವುಗಳ ಸಂಬಂಧದ ವ್ರತಗಳನ್ನೂ ವಿವರಿಸುತ್ತವೆ.

೪. **ಉಪನಿಷತ್ತುಗಳು** :— ಬ್ರಾಹ್ಮಣಗಳೊಳಗಿನ ಆಧ್ಯಾತ್ಮಿಕ ಭಾಗಕ್ಕೆ ಉಪನಿಷತ್ತುಗಳೆನ್ನುವರು. ಆರಂಭ ಕಾಲದಲ್ಲಿ, ಆರ್ಯರು ಸ್ವ-ಶಕ್ತಿಗಳಿಂದ ಪೃಥ್ವಿ, ಆಪ್, ತೇಜ, ವಾಯು, ಆಕಾಶ ಎಂಬ ಪಂಚ ಮಹಾಭೂತಗಳನ್ನು ಭಕ್ತಿಯಿಂದ ಪ್ರಾರ್ಥಿಸಿದರು. ಉಪನಿಷತ್ಕಾಲದಲ್ಲಿ ಅವರು ನೀತಿ - ವಿಷಯಗಳನ್ನುಂಟು ಮಾಡುವ ಈ ಶಕ್ತಿಗಳಿಗೆ ಮೂಲ ಕಾರಣವೇನಾದರೂ ಇರಬಹುದೆಂಬ ವಿಚಾರವನ್ನು ಮಾಡಹತ್ತಿದರು; ಮತ್ತು ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣನಾದ **ಪರಮಾತ್ಮನ** ಸ್ವರೂಪವನ್ನು ಮನಗಂಡರು. ಬ್ರಾಹ್ಮಣಗಳಿಂದಲೇ ಈ ಉಪನಿಷತ್ತುಗಳ ಉಗಮವಾಗಿದ್ದರೂ ಇವು ಕರ್ಮಮಾರ್ಗವನ್ನು ಹಿಂದಿಡುತ್ತ ಆಧ್ಯಾತ್ಮವಿದ್ಯೆಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟಿರುತ್ತವೆ. ಆಧ್ಯಾತ್ಮಜ್ಞಾನದ ಅತಿ ಸರಸವಾದ ವಿವೇಚನೆಯು ಉಪನಿಷತ್ತುಗಳಲ್ಲಿರುವದು. ತತ್ವಜ್ಞಾನದ ಸಂಬಂಧದ ಗ್ರಂಥಗಳಲ್ಲಿ ಉಪನಿಷತ್ತುಗಳಷ್ಟು ಶ್ರೇಷ್ಠವಾದ ಗ್ರಂಥಗಳು ಜಗತ್ತಿನಲ್ಲಿ ಇನ್ನಾವೂ ಇಲ್ಲ. ಉಪನಿಷತ್ತುಗಳನ್ನು ಓದಿದ ಜರ್ಮನ್ ಪಂಡಿತನಾದ **ಶೋಪೆನ್ ಹಾಯರ**ನು "ಇವು ನನ್ನ ಜೀವದ ತಳಮಳವನ್ನು ಶಾಂತಗೊಳಿಸಲು ಕಾರಣವಾದವು" ಎಂದಿರುವನು.

ಸಂಹಿತೆ, ಬ್ರಾಹ್ಮಣ, ಉಪನಿಷತ್ತು ಇವುಗಳಿಗೆಲ್ಲ ಕೂಡಿ **ಶ್ರುತಿ**ಗಳೆಂಬ ಹೆಸರು.

೫. **ಆಗಮಗಳು** :— ಉಪನಿಷತ್ಕಾಲದ ನಂತರ **ಶೈವ, ವೈಷ್ಣವ** ಮೊದಲಾದ ಆಗಮಗಳುಂಟಾದವು. ಇವು ಆ ಆ ಮತಗಳ ಉಪಾಸ್ಯ ದೇವತೆಗಳ ಉಪಾಸನಾ ವಿಧಿಗಳನ್ನೂ ಆ ಆ ಮೂರ್ತಿಗಳ ರಚನೆಯ ಮತ್ತು ಪ್ರತಿಷ್ಠಾಪನೆಯ ಕ್ರಮಗಳನ್ನೂ ವಿವರಿಸುತ್ತವೆ.

೬. **ಸೂತ್ರಗಳು** :— ಗ್ರಂಥವಿಸ್ತಾರವು ಹೆಚ್ಚಾದಂತೆ ಅದರಲ್ಲಿಯ ವರ್ಣನೆಗಳನ್ನೂ ವಿವರಣೆಗಳನ್ನೂ ನೆನಪಿನಲ್ಲಿಡುವದು ಕಠಿಣವಾಯಿತು. ಆಗ ಸ್ವಲ್ಪದರಲ್ಲಿ ಬಹಳ ಅರ್ಥಗಳನ್ನು ಕೊಡುವ ವಾಕ್ಯಗಳನ್ನು ರಚಿಸ ಹತ್ತಿದರು. ಇಂಥ ವಾಕ್ಯಗಳಿಗೆ **ಸೂತ್ರ**ಗಳೆಂಬ ಸಂಜ್ಞೆ. ಸೂತ್ರಗಳು ಮೂರು ಪ್ರಕಾರವವು. ೧. ಯಜ್ಞಸಂಬಂಧವಾದ ನಿಯಮಗಳನ್ನು ಹೇಳುವ **ಶ್ರೌತಸೂತ್ರ**ಗಳು. ೨. ಪ್ರತಿಯೊಬ್ಬನು ತನ್ನ ಮನೆಯಲ್ಲಿ ಮಾಡತಕ್ಕ ಕಾರ್ಯಗಳ ನಿಯಮಗಳನ್ನು ಸೂಚಿಸುವ **ಗೃಹ್ಯಸೂತ್ರ**ಗಳು ೩. ಸಮಾಜದ ಸುಸ್ಥಿತಿಗೋಸ್ಕರ ಮಾಡಿದ ನಿಯಮಗಳನ್ನು ತಿಳಿಸುವ **ಧರ್ಮಸೂತ್ರ**ಗಳು.

ಇವಲ್ಲದೆ ನ್ಯಾಯ, ವ್ಯಾಕರಣ, ವೇದಾಂತ ಈ ವಿಷಯಗಳ ಸಂಬಂಧವಾಗಿಯೂ ಸೂತ್ರಗ್ರಂಥಗಳು ಬರೆಯಲ್ಪಟ್ಟವು.

೭. **ಸ್ಮೃತಿಗಳು** :— ಧರ್ಮಸೂತ್ರಗಳನ್ನು ವಿಸ್ತಾರವಾಗಿ ವಿವರಿಸುವ ಸ್ಮೃತಿಗಳನ್ನು ಮುಂದಿನ ಕಾಲದಲ್ಲಿ ಅನೇಕರು ಬರೆದರು. ಇವುಗಳಲ್ಲಿಯ **ಮನು, ಯಾಜ್ಞವಲ್ಕ್ಯ** ಇವರ ಸ್ಮೃತಿಗಳು ಒಳ್ಳೆಯ ಹೆಸರಾದವುಗಳು.

೮. **ಇತಿಹಾಸಗಳೂ ಪುರಾಣಗಳೂ** :— ಇವೆಲ್ಲವುಗಳ ಹೊರತಾದ ಆರ್ಯರ ಮುಖ್ಯ ಗ್ರಂಥಗಳೆಂದರೆ ಇತಿಹಾಸಗಳೂ, ಪುರಾಣಗಳೂ. ರಾಮಾಯಣ–ಮಹಾಭಾರತಗಳು ಮಹತ್ವದ ಇತಿಹಾಸ ಗ್ರಂಥಗಳಾಗಿವೆ. ಪುರಾಣಗಳು ಹದಿನೆಂಟು ಅವೆ. ಈ ಇತಿಹಾಸ–ಪುರಾಣಗಳಲ್ಲಿ ಆರ್ಯರ ಅರಸುಮನೆತನಗಳ ಇತಿಹಾಸವೂ ಸಾಮಾನ್ಯರಿಗೆ ಉಪಯುಕ್ತವೆನಿಸುವ ನೀತಿಯೂ ಹೇಳಲ್ಪಟ್ಟಿವೆ. ಶ್ರುತಿ – ಸ್ಮೃತಿ – ಪುರಾಣಗಳ ತಳಹದಿಯ ಮೇಲೆಯೇ ಹಿಂದುಸಂಸ್ಕೃತಿ ಎಂಬ ಮಂದಿರವು ರಚಿತವಾಗಿದೆ. ಶ್ರುತಿ

ಗಳ ಆಧಾರದಿಂದ ಸ್ಮೃತಿಗಳೂ, ಶ್ರುತಿ-ಸ್ಮೃತಿಗಳ ಆಧಾರದಿಂದ ಪುರಾಣಗಳೂ ಉಂಟಾಗಿವೆ. ಇವೆಲ್ಲ ಗ್ರಂಥಗಳ ರಚನಾ ಕಾಲವು ನಿಷ್ಕರ್ಷವಾಗಿ ತಿಳಿದಿರುವದಿಲ್ಲ.

೯. **ಉಳಿದ ಶಾಸ್ತ್ರಗಳು**:— ಆರ್ಯರು **ಗಣಿತ, ಜ್ಯೋತಿಷ, ವ್ಯಾಕರಣ** ಮುಂತಾದ ಶಾಸ್ತ್ರಗಳನ್ನು ಅರತಿದ್ದರು. ಆದರೆ ಅವನ್ನೆಲ್ಲ ಅವರು ವೈದಿಕಧರ್ಮದ ಉಪಸಾಧನಗಳೆಂದು ತಿಳಿದಿದ್ದರು ಯಜ್ಞ ಮಾಡ ತಕ್ಕ ಕಾಲವನ್ನು ನಿಶ್ಚಿತವಾಗಿ ತಿಳಿಯುವದಕ್ಕೆಂದು ನಕ್ಷತ್ರಗಳನ್ನು ನಿರೀಕ್ಷಿಸಿ ಕಾಲಗಣನೆಯನ್ನು ಮಾಡಹತ್ತಿದರು. ವಿಧನಿಧದ ಆಕಾರದ ಯಜ್ಞಮಂಡಲಗಳನ್ನು ತಪ್ಪಿಲ್ಲದಂತೆ ರಚಿಸುವ ಸಾಧವೆಂದು ಭೂಮಿತಿಯನ್ನು ಅಭ್ಯಾಸಿಸಿದರು. ವೈದಿಕ ವಾಙ್ಮಯದಲ್ಲಿಯ ಶಬ್ದಗಳ ಹಾಗು ಪ್ರಯೋಗಗಳ ಸಾಧುತ್ವವನ್ನು ಜೋಡಿಸುವದಕ್ಕಾಗಿ **ವ್ಯಾಕರಣ** ಶಾಸ್ತ್ರವು ಉಂಟಾಯಿತು. **ದಶಾಂಶ ಪದ್ಧತಿ**ಯು ಮೂಲತಃ ಆರ್ಯರದೇ. ಅದನ್ನು ಅರಬರು ಕಲಿತು ಕೊಂಡರು ಅವರಿಂದ ಅದು ಮುಂದೆ ಗ್ರೀಸಕ್ಕೂ ಯುರೋಪದ ಉಳಿದ ದೇಶಗಳಿಗೂ ಹೋಯಿತು.

## ೬ ನೆಯ ಪಾಠ.

### ರಾಮಾಯಣವೂ ಮಹಾಭಾರತವೂ.



೧. **ಸಾಮಾನ್ಯ ಸ್ವರೂಪ**:— ರಾಮಾಯಣ-ಮಹಾಭಾರತಗಳು ನಮ್ಮಲ್ಲಿ ಸ್ಫೂರ್ತಿಯನ್ನು ಉಂಟುಮಾಡುವ ರಾಷ್ಟ್ರೀಯ ಇತಿಹಾಸ ಗ್ರಂಥಗಳಾಗಿವೆ. ರಾಮಾಯಣದಲ್ಲಿ ಸುಮಾರು ಇಪ್ಪತ್ತು ಸಾವಿರ ಶ್ಲೋಕಗಳೂ, ಮಹಾಭಾರತದಲ್ಲಿ ಇದರ ಸುಮಾರು ನಾಲ್ಕುಮಡಿ ಶ್ಲೋಕಗಳೂ ಇರುವವು. ಇವುಗಳನ್ನು ಅನುಕ್ರಮವಾಗಿ **ವಾಲ್ಮೀಕಿ, ವ್ಯಾಸ** ಋಷಿಗಳು ಬರೆದರು. ಇವೆರಡು ಗ್ರಂಥಗಳಿಂದ ಆರ್ಯರ **ಧಾರ್ಮಿಕ, ಸಾಮಾಜಿಕ, ರಾಜಕೀಯ** ಮೊದಲಾದ ಎಲ್ಲ ಬಗೆಯ ಜ್ಞಾನವು ಆಗುವದು. ಪ್ರಾಚೀನ ಭರತಖಂಡದ ವೈಭವದ ಹಾಗು ಸುಧಾರಣೆಯ ಸುರಸವಾದ ವರ್ಣನೆಯು ಇವುಗಳಲ್ಲಿಯ

ಹಾಗೆ ಇನ್ನಾವ ಗ್ರಂಥಗಳಲ್ಲಿಯೂ ಇಲ್ಲ. ಹಿಂದುಸ್ಥಾನದ ಎಲ್ಲ ಭಾಷೆಗಳಲ್ಲಿಯೂ ಈ ಗ್ರಂಥಗಳ ಭಾಷಾಂತರಗಳು ಆಗಿರುತ್ತವೆ.

೨. **ರಾಮಾಯಣ**:— ಹಿಂದಕ್ಕೆ ಅಯೋಧ್ಯೆಯಲ್ಲಿ **ದಶರಥ**ನೆಂಬ ಸೂರ್ಯವಂಶದ ಅರಸನು ರಾಜ್ಯನಾಳುತ್ತಿದ್ದನು. ಆತನಿಗೆ **ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನ** ಎಂಬ ನಾಲ್ವರು ಮಕ್ಕಳಿದ್ದರು. ಇವರೆಲ್ಲರು ಮಹಾ ಪರಾಕ್ರಮಿಗಳೂ ಸದ್ಗುಣಿಗಳೂ ಆಗಿದ್ದರು. ಶ್ರೀರಾಮನನ್ನು ದಶರಥನು ಹೆಚ್ಚಾಗಿ ಪ್ರೀತಿಸುತ್ತಿದ್ದನು. ಆತನು ಚಿಕ್ಕಂದಿನಲ್ಲಿಯೇ ಅತಿ ಭಾರವಾದ ಶಿವನ ಬಿಲ್ಲನ್ನು ಮುರಿದು **ಜನಕರಾಜನ** ಮಗಳಾದ **ಸೀತಾದೇವಿ**ಯನ್ನು ಲಗ್ನವಾಗಿದ್ದನು.

ಹೀಗಿರುವಾಗ ದಶರಥನು ಶ್ರೀರಾಮನ ಯುವರಾಜ ಪಟ್ಟಾಭಿಷೇಕದ ಸಿದ್ಧತೆಯನ್ನು ಮಾಡತೊಡಗಿದನು. ಇದು ಶ್ರೀರಾಮನ ಮಲತಾಯಿಯೂ ಭರತನ ತಾಯಿಯೂ ಆದ **ಕೈಕೇಯಿ**ಯ ಮನಸ್ಸಿಗೆ ಬರಲಿಲ್ಲ. ಆಕೆಯು ತನ್ನ ಮಗನಾದ ಭರತನಿಗೆ ಪಟ್ಟವಾಗಬೇಕೆಂದೂ ಶ್ರೀ ರಾಮನನ್ನು ಹದಿನಾಲ್ಕು ವರುಷ ವನವಾಸಕ್ಕೆ ಕಳುಹಬೇಕೆಂದೂ ದಶರಥನನ್ನು ಕೇಳಿಕೊಂಡಳು. ಕೇಳಿಕೊಂಡ ಎರಡು ಮಾತುಗಳನ್ನು ನಡೆಯಿಸುವೆನೆಂದು ದಶರಥನು ಆಕೆಗೆ ಮೊದಲು ವಚನ ಕೊಟ್ಟಿದ್ದನಾದುದರಿಂದ ಈಗ ಆಕೆಯ ಮಾತನ್ನು ಮೀರುವಂತೆ ಇದ್ದಿಲ್ಲ. ಶ್ರೀರಾಮನನ್ನು ಕಾಡಿಗೆ ಕಳುಹುವದಂತೂ ಹೆಚ್ಚಿನ ಕಷ್ಟ. ಹೀಗಾಗಿ ಆವನು ಬಹಳ ವ್ಯಸನಕ್ಕೀಡಾದನು. ಇದನ್ನು ಕಂಡು ಶ್ರೀರಾಮನು— "ತಂದೆಯೇ ವ್ಯಸನಪಡಬೇಡ; ನಿನ್ನ ವಚನವನ್ನು ನಡೆಯಿಸುವದಕ್ಕಾಗಿ ನಾನು ಸಂತೋಷದಿಂದ ಅರಣ್ಯಕ್ಕೆ ಹೋಗುವೆನು. ಕೈಕೇಯಿ ದೇವಿಯ ಇಚ್ಛೆಯಂತೆ ಭರತನನ್ನೆ ಪಟ್ಟಕ್ಕೆ ಕುಳ್ಳಿರಿಸು. ನಿನ್ನ ವಚನವನ್ನು ಸುಳ್ಳುಮಾಡಿ ಎಂಥ ಹೆಚ್ಚಿನ ಸುಖವನ್ನಾದರೂ ಅನುಭವಿಸಲು ನನ್ನ ಮನಸ್ಸು ಒಪ್ಪುವದಿಲ್ಲ." ಎಂದನು.

ಮುಂದೆ ಶ್ರೀರಾಮನು ಸೀತಾಲಕ್ಷ್ಮಣರನ್ನು ಕೂಡಿಕೊಂಡು ಅರಣ್ಯಕ್ಕೆ ಹೊರಟನು. ಭರತನು ಆಗ ಅಯೋಧ್ಯೆಯಲ್ಲಿ ಇದ್ದಿಲ್ಲ. ದಶರಥನು

ಶ್ರೀರಾಮನ ಶೋಕದಿಂದ ಮರಣಹೊಂದಿದನು. ಭರತನು ಬಂದು ನಡೆದ ಎಲ್ಲ ಸಂಗತಿಯನ್ನು ತಿಳಿದು ಕೈಕೇಯಿಯೊಡನೆ **ಚಿತ್ರಕೂಟ** ಪರ್ವತದಲ್ಲಿ ಶ್ರೀರಾಮನಿದ್ದೆಡೆಗೆ ಹೋಗಿ, ತಿರುಗಿ ಅಯೋಧ್ಯೆಗೆ ಬರಬೇಕೆಂದು ಆತನನ್ನು ಬಹಳವಾಗಿ ಬೇಡಿಕೊಂಡನು. ಆದಕ್ಕೆ ಶ್ರೀರಾಮನು— "ತಮ್ಮಾ, ನಾನು



**ಭರತನು ಶ್ರೀರಾಮಚಂದ್ರನನ್ನು ಬೆಟ್ಟಿಯಾದದ್ದು.**

ತಿರುಗಿ ಬರುವದು ಯೋಗ್ಯವಾಗುವದಿಲ್ಲ. ವಚನಕೊಟ್ಟಂತೆ ಹದಿನಾಲ್ಕು ವರುಷದ ವನವಾಸವನ್ನು ಪೂರ್ಣಮಾಡಲೇ ಬೇಕು. ಆದ ಮಾತಿಗಾಗಿ ಇನ್ನು ಚಿಂತೆಗೊಳ್ಳಬೇಡ. ಪ್ರಜೆಗಳಿಗೆ ಹಿತಕರವಾಗುವಂತೆ ರಾಜ್ಯಭಾರ ವನ್ನು ಸಾಗಿಸುವದು ಈಗ ನಿನ್ನ ಕರ್ತವ್ಯವಾಗಿದೆ," ಎಂದನು. ಆಗ

ಅಣ್ಣನ ಮಾತಿಗೆ ಒಪ್ಪಿ ಭರತನು— "ನೀನು ಬರುವ ವರೆಗೆ ನಿನ್ನ ಪಾದಸಾಕ್ಷಿಯಿಂದ ರಾಜ್ಯಭಾರವನ್ನು ಸಾಗಿಸುವೆನು. ಆ ಮೇಲೆ ನೀನು ಬರದೆ ಇದ್ದರೆ, ನಾನು ಈ ನನ್ನ ದೇಹವನ್ನು ಅಗ್ನಿಗೆ ಅರ್ಪಿಸತಕ್ಕವನು." ಎಂದು ಹೇಳಿ, ಶ್ರೀರಾಮನ ಅಪ್ಪಣೆಯನ್ನು ಪಡೆದು ಅಯೋಧ್ಯೆಗೆ ಬಂದು, ರಾಜ್ಯಪರಿಪಾಲನೆಯನ್ನು ಮಾಡಿಕೊಂಡಿದ್ದನು.

ತರುವಾಯ, ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ * **ಪಂಚವಟಿ**ಯಲ್ಲಿರುವಾಗ **ರಾವಣ**ನೆಂಬ ರಾಕ್ಷಸನು ಶ್ರೀರಾಮ-ಲಕ್ಷ್ಮಣರು ಆಶ್ರಮದಲ್ಲಿ ಇಲ್ಲದ ಹೊತ್ತು ನಾಧಿಸಿ, ಸೀತಾದೇವಿಯನ್ನು ಹರಣಮಾಡಿಕೊಂಡು ತನ್ನ **ಲಂಕಾ** ಪಟ್ಟಣಕ್ಕೆ ಒಯ್ದು, **ಅಶೋಕ** ವನದಲ್ಲಿ ಇರಿಸಿದನು. ಮತ್ತು ತನ್ನ ತಂಗಿಯಾದ **ಶೂರ್ಪನಖಿ**ಯು ಕಿವಿ-ಮೂಗುಗಳನ್ನು ಕೊಯ್ಯಿಸಿದ ರಾಮನ ಸೇಡು ತೀರಿಸಿದೆನೆಂದು ತಿಳಿದು ಸಂಭ್ರಮದಲ್ಲಿದ್ದನು.

ಇತ್ತ ಶ್ರೀರಾಮನೂ ಲಕ್ಷ್ಮಣನೂ ಕಾಡು ಕಾಡು ಹುಡುಕಿಯೂ ಸೀತಾದೇವಿಯ ಶೋಧವಾಗದಿರಲು ಬಹಳ ದುಃಖಿತರಾದರು. ಮುಂದೆ ಅವರು ವಾನರರ ಒಡೆಯನಾದ **ಸುಗ್ರೀವ**ನ ಸ್ನೇಹವನ್ನು ಸಂಪಾದಿಸಿದರು. ಸುಗ್ರೀವನ ಕಡೆಯ **ಹನುಮಂತ**ನೆಂಬ ಬಲಶಾಲಿಯು ಶ್ರೀರಾಮನ ಗುಣಾತಿಶಯಗಳನ್ನು ತಿಳಿದು ಆತನ ಭಕ್ತನಾದನು. ಈ ಹನುಮಂತನೇ, "ರಾವಣನು ಸೀತಾದೇವಿಯನ್ನು ಕದ್ದೊಯ್ದು ತನ್ನ ಅಶೋಕ ವನದಲ್ಲಿ ಇಟ್ಟಿರುವನು" ಎಂಬ ಸುದ್ದಿಯನ್ನು ತಂದನು. ಶ್ರೀರಾಮನು ವಾನರರ ಸೇನೆಯ ಸಹಾಯದಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕೆಯನ್ನು ಸೇರಿ, ರಾವಣಾದಿಗಳೊಡನೆ ಯುದ್ಧಮಾಡಿ ಅವರೆಲ್ಲರನ್ನು ಸೋಲಿಸಿ, ಸೀತಾದೇವಿಯನ್ನು ಕರಕೊಂಡು ಮರಳಿ **ಅಯೋಧ್ಯೆಗೆ** ಬಂದನು. ಇಲ್ಲಿಗೆ ಹದಿನಾಲ್ಕು ವರುಷಗಳೂ ಪೂರ್ಣವಾದವು. ಶ್ರೀರಾಮನು ಪಟ್ಟಕ್ಕೆ ಕೂತು ತಮ್ಮಂದಿರೊಡನೆ ಸುಖವಾಗಿ ರಾಜ್ಯಪರಿಪಾಲನೆಯನ್ನು ಮಾಡಿಕೊಂಡು ಇರುತ್ತಿದ್ದನು.

---

* ಇದು ನಾಸಿಕ ಪಟ್ಟಣದ ನೆರೆಯಲ್ಲಿದೆ. ಇಲ್ಲಿಯ ಶ್ರೀರಾಮನ ಮಂದಿರವು ಸುಂದರವೂ ಭವ್ಯವೂ ಆಗಿದೆ. ಇದನ್ನು ಪೇಶ್ವೆಯವರು ಕ್ರಿ. ಶ. ೧೭೯೦ರಲ್ಲಿ ಕಟ್ಟಿಸಿದರು.

ರಾಮರಾಜ್ಯದಲ್ಲಿ ಮೋಡಗಳು ಸಕಾಲಕ್ಕೆ ಮಳೆಗರೆಯುತ್ತಿದ್ದವು; ಭೂಮಿಯು ಉತ್ತಮವಾದ ಫಲವನ್ನು ಕೊಡುತ್ತಲಿದ್ದಿತು; ಆ ಕಾಲದಲ್ಲಿ ಅಕಾಲದ ಮರಣವಿರಲಿಲ್ಲ, ಜನರು ಬೇನೆಬೇಸರಿಕೆಗಳನ್ನು ಅರಿಯರು. ಶ್ರೀರಾಮನು ಏಕವಚನಿಯೂ ಏಕಬಾಣಿಯೂ ಏಕಪತ್ನೀವ್ರತಸ್ಥನೂ ಆಗಿದ್ದನು. ಶ್ರೀರಾಮನ ಸ್ಮರಣೆಯೊಡನೆ ಆತನ ಪ್ರಜಾವಾತ್ಸಲ್ಯ, ಬಂಧುಪ್ರೇಮ, ಪಿತೃಭಕ್ತಿ, ಕರ್ತವ್ಯನಿಷ್ಠೆ, ಸಹನಶಕ್ತಿ, ಕ್ಷಮಾಗುಣ, ಅಸಾಮಾನ್ಯ ಪರಾಕ್ರಮ, ಧೈರ್ಯ, ತೇಜಸ್ವಿತೆ ಮುಂತಾದ ಸದ್ಗುಣಗಳು ಕಣ್ಣು ಮುಂದೆ ಕಟ್ಟಿದಂತಾಗಿ ಆನಂದ ವಿಸ್ಮಯಗಳಿಂದ ಮನಸ್ಸು ಕ್ಷಣಹೊತ್ತು ಆತನಲ್ಲಿ ಲೀನವಾಗುವದು. ಇಂಥ ಸದ್ಗುಣಸ್ವರೂಪನಾದುದರಿಂದಲೇ ಶ್ರೀ ರಾಮನನ್ನು ದೇವರ ಅವತಾರವೆಂದು ಭಾರತೀಯರೆಲ್ಲರು ಭಾವಿಸಿರುವರು.

೩. **ಮಹಾಭಾರತ**. — ಚಂದ್ರವಂಶದ **ಧೃತರಾಷ್ಟ್ರ** ರಾಜನಿಗೆ **ದುರ್ಯೋಧನ** ಮೊದಲಾದ ನೂರು ಮಂದಿ ಮಕ್ಕಳಿದ್ದರು. ಇವರೇ **ಕೌರವರು.** ಧೃತರಾಷ್ಟ್ರನು ಕುರುಡನಾಗಿದ್ದುದರಿಂದ ಅವನ ತಮ್ಮನಾದ **ಪಾಂಡು**ರಾಜನೇ ರಾಜ್ಯಭಾರವನ್ನು ನಾಗಿಸುತ್ತಿದ್ದನು. ಈ ಪಾಂಡುರಾಜನಿಗೆ **ಧರ್ಮ, ಭೀಮ, ಅರ್ಜುನ, ನಕುಲ, ಸಹದೇವ** ಎಂಬ ಐವರು ಮಕ್ಕಳಿದ್ದರು. ಇವರಿಗೆ **ಪಾಂಡವ**ರೆಂಬ ಹೆಸರು. ಮುಂದೆ ಪಾಂಡುರಾಜನು ಸಾಯಲು ಧೃತರಾಷ್ಟ್ರನು ತಮ್ಮನ ಮಕ್ಕಳಾದ ಪಾಂಡವರನ್ನು ಪ್ರೀತಿಯಿಂದ ಸಲುಹಿ, ಅವರಿಗೆ ಅರ್ಧ ರಾಜ್ಯವನ್ನು ಕೊಟ್ಟನು. ಇರಇರುತ್ತ ಕೌರವರಿಗೂ ಪಾಂಡವರಿಗೂ ಹಗೆತನ ಉಂಟಾಯಿತು. ಭೀಮಾರ್ಜುನರು ಒಳ್ಳೆಯ ಶೂರರಿದ್ದದರಿಂದ ಕೌರವರ ಆಟವೇನೂ ಸಾಗದಾಯಿತು. ಆಗ ಅವರು ಪಾಂಡವರನ್ನು ದ್ಯೂತಕ್ಕೆ ಬರಮಾಡಿಕೊಂಡು ಮೋಸದಿಂದ ಸೋಲಿಸಿದರು. ಮೊದಲೇ ಗೊತ್ತಾದ ಮೇರೆಗೆ ಸೋತ ಪಾಂಡವರು ತಮ್ಮ ರಾಜ್ಯವನ್ನೆಲ್ಲ ಕೌರವರಿಗೆ ಕೊಟ್ಟು ಹನ್ನೆರಡು ವರುಷ ವನವಾಸ, ಒಂದು ವರ್ಷ ಅಜ್ಞಾತವಾಸ ಇವುಗಳನ್ನು ಅನುಭವಿಸುವದಕ್ಕಾಗಿ ಅರಣ್ಯಕ್ಕೆ ಹೋದರು. ಈ ಹದಿಮೂರು ವರ್ಷಗಳಲ್ಲಿ ಪಾಂಡವರು ಪರಿಪರಿಯ ಕಷ್ಟ

ಗಳನ್ನು ಸಹಿಸಿ ಮರಳಿ ಬಂದು ತಮ್ಮ ರಾಜ್ಯವನ್ನು ಬೇಡಿದರು. ಕಡೆಗೆ ಐದು ಗ್ರಾಮಗಳನ್ನಾದರೂ ಕೊಡಿರೆಂದು ಕೇಳಿದರೂ "ನಿಮಗೆ ಸೂಜಿಯ ತುದಿಗೆ ಹತ್ತುವಷ್ಟು ಭೂಮಿಯು ಕೂಡ ಸಿಗಲಾರದು;" ಎಂದು ದುರ್ಯೋಧನನು ಹೇಳಿದನು. ದುರ್ಯೋಧನಾದಿಗಳು ಐಶ್ವರ್ಯಮದ ದಿಂದ ಉನ್ಮತ್ತರಾಗಿದ್ದರು. ಯಾರ ಹಿತೋಕ್ತಿಗಳನ್ನೂ ಅವರು ಲೆಕ್ಕಿಸಲಿಲ್ಲ.

ಪಾಂಡವರು **ಶ್ರೀಕೃಷ್ಣನನ್ನೂ** ತಮ್ಮ ಪಕ್ಷದ ಉಳಿದ ಅರಸ ರನ್ನೂ ಕೂಡಿಕೊಂಡು ಯುದ್ಧಕ್ಕೆ ಅನುವಾದರು. ಕೌರವರು **ಕರ್ಣಾದಿ** ವೀರರಿಂದಲೂ ಮಾಂಡಲಿಕರಾಜರಿಂದಲೂ ಮಿಲಿತರಾಗಿ ಪಾಂಡವರನ್ನು ಎದುರಿಸಿದರು. ಹದಿನೆಂಟು ದಿವಸಗಳವರೆಗೆ ಘೋರವಾದ * ಸಂಗ್ರಾಮ ವಾಯಿತು. ಕೌರವರೆಲ್ಲರು ಮಡಿದರು. ಪಾಂಡವರಿಗೆ ಜಯದೊರೆಯಿತು. ಈ ಯುದ್ಧದ ಆರಂಭದಲ್ಲಿ ಅರ್ಜುನನು "ರಾಜ್ಯದಾಶೆಯಿಂದ ಅಣ್ಣ ತಮ್ಮಂದಿರ ಮತ್ತು ಗುರುಹಿರಿಯರ ಕೂಡ ಯುದ್ಧಮಾಡಿ ನಾನು ಹಿಂಸೆಯ ಪಾಪವನ್ನು ಹೊಂದಲಾರೆ, ನನಗೆ ಗೆಲವು ಬೇಡ, ರಾಜ್ಯವು ಬೇಡ, ಸುಖವೂ ಬೇಡ ಇವುಗಳಿಂದ ಕ್ಷೇಮವಾಗುವದೆಂದು ನನಗೆ ತೋರುವದಿಲ್ಲ." ಎಂದು ಖಿನ್ನ ಮನಸ್ಸಿನಿಂದ ನುಡಿದನು. ಆಗ ಶ್ರೀಕೃಷ್ಣನು— "ಅರ್ಜುನನೇ ನೀನು ಕ್ಷತ್ರಿಯನು; ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪಾಲಿಸುವದು ನಿನ್ನ ಧರ್ಮವಾಗಿದೆ, ಈಗ ನೀನು ಹಿಂಜರಿದರೆ ವೈರಿಗಳು ಉಪಹಾಸಮಾಡುವರು. ಗೆದ್ದರೆ ರಾಜ್ಯವು ದೊರೆಯುವದು, ಕರ್ತವ್ಯವೆಂದು ಯುದ್ಧಮಾಡುತ್ತಿರುವಾಗ ಒಂದುವೇಳೆ ನಾವು ಬಂದರೆ ವೀರೋಚಿತವಾದ ಸದ್ಗತಿಯು ನಿನಗುಂಟಾವದು. ಇಲ್ಲದ ಸುಳ್ಳು ವಿಚಾರ ಗಳಿಗೆ ಮೋಸಹೋಗಬೇಡ." ಎಂದು ಉಪದೇಶಮಾಡಿದನು. ಶ್ರೀಕೃಷ್ಣನ ಈ ಉಪದೇಶದಿಂದ ಅರ್ಜುನನ ಸಮಾಧಾನವಾಗಿ ಆತನು ಯುದ್ಧಕ್ಕೆ ಸಿದ್ಧನಾಗಿ ಪರಾಕ್ರಮದಿಂದ ಕಾದಿ ಜಯಶೀಲನಾದನು.

* ಶ್ರೀ ವೈದ್ಯ ಚಿಂತಾಮಣಿರಾಯರು, ಈ ಮಹಾಭಾರತ ಯುದ್ಧಕಾಲವು ಕ್ರಿ. ಶ. ಪೂ. ೩೧೦೧ನೆಯ ವರ್ಷವೆಂದು ಸಿದ್ಧಮಾಡಿರುವರು.

ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶ ಗ್ರಂಥವೇ **ಭಗವದ್ಗೀತೆಯು.** ಇದರಲ್ಲಿ ಹದಿನೆಂಟು ಅಧ್ಯಾಯಗಳೂ ಏಳುನೂರು ಶ್ಲೋಕಗಳೂ ಇರುವವು. ವೇದ-ಉಪನಿಷತ್ತುಗಳಲ್ಲಿಯ ತತ್ವಜ್ಞಾನವು ಸಾರರೂಪವಾಗಿ ಇದರಲ್ಲಿ ಹೇಳಲ್ಪಟ್ಟಿದೆ. ಇದು ಹಿಂದುಗಳ ಧರ್ಮಗ್ರಂಥವು. ಮಹಾಭಾರತದಲ್ಲಿ ವರ್ಣಿತವಾದ ಶ್ರೀಕೃಷ್ಣನ ಮುತ್ಸದ್ದಿತನ, ಅಸಾಮಾನ್ಯ ಪರಾಕ್ರಮ, ಭಕ್ತವಾತ್ಸಲ್ಯ, ಲೋಕಕಲ್ಯಾಣೇಚ್ಛೆ ಇವುಗಳೂ ಅರ್ಜುನನ ಧನುರ್ವಿದ್ಯೆಯ ಕೌಶಲ್ಯವೂ ಶೌರ್ಯವೂ ಭೀಷ್ಮನ ಸ್ಥಿರತೆ – ಬ್ರಹ್ಮಚರ್ಯಗಳೂ ಅವರವರ ಶ್ರೇಷ್ಠತೆಗೆ ಕಾರಣಗಳಾಗಿರುವವು. 'ಅಸಹ್ಯವಾದ ಕಷ್ಟಗಳಿಂದ ಸಮಾಜವು ಕಳೆಗುಂದಿದಾಗ ನಾನು ಅವತರಿಸಿ ಅವರನ್ನು ಸುಸ್ಥಿತಿಗೆ ತರುವೆನು.' ಎಂದು ಭಗವಂತನ ವಚನವುಂಟು. ಈ ವಚನದಂತೆಯೇ ಪರಮಾತ್ಮನು ಶ್ರೀಕೃಷ್ಣನ ರೂಪದಿಂದ ಅವತರಿಸಿ ಸಜ್ಜನರ ರಕ್ಷಣೆ, ದುರ್ಜನರ ಸಂಹರಣೆ, ಸದ್ಧರ್ಮದ ಸಂಸ್ಥಾಪನೆ ಎಂಬ ಕಾರ್ಯಗಳನ್ನು ನೆರವೇರಿಸುವನು ಎಂದು ಹಿಂದುಗಳು ನಂಬುವರು.

## ೭ನೆಯ ಪಾಠ.

### ಆರ್ಯಸಂಸ್ಕೃತಿಯು ಇಡೀ ದೇಶವನ್ನು ವ್ಯಾಪಿಸಿದ್ದು.

(ಕ್ರಿ. ಶ. ಪೂ ೮೦೦ ರಿಂದ ಕ್ರಿ. ಶ. ಪೂ. ೩೨೦)



**೧. ಭರತಖಂಡದ ರಾಜ್ಯಗಳು :—** ಈ ಕಾಲದಲ್ಲಿ ಹಿಂದುಸ್ಥಾನದಲ್ಲಿ ಅಲ್ಲಲ್ಲಿ ನೆಲೆಗೊಂಡಿದ್ದ ಪ್ರಸಿದ್ಧವಾದ ರಾಜವಂಶಗಳ ಹೆಸರುಗಳು ಮಾತ್ರ ಗೊತ್ತಾಗಿವೆ. **ಮಗಧ** ( ಬಿಹಾರ ), **ಅಂಗ** ( ಪಶ್ಚಿಮ ಬಂಗಾಲ), **ವಂಗ** (ಪೂರ್ವ ಬಂಗಾಲ), **ಕಲಿಂಗ** (ಓರಿಸಾ), **ಆಂಧ್ರ** ( ದಕ್ಷಿಣ ಹಿಂದುಸ್ಥಾನದ ಮಧ್ಯಭಾಗ ), **ಚೋಳ** ( ಕಾರೋಮಾಂಡಲ ), **ಚೇರ** (ಮಲಬಾರ), **ಪಾಂಡ್ಯ** (ಮಧುರೆ), **ಅವಂತಿ** ( ಮಾಳವ ), **ಸೌರಾಷ್ಟ್ರ** (ಗುಜರಾಥ) ಮೊದಲಾದ ರಾಜ್ಯಗಳ ಉಲ್ಲೇಖವು ಆ ಕಾಲದ




ಭರತಖಂಡದ ಪ್ರಾಚೀನ ರಾಜ್ಯಗಳು.

ಗ್ರಂಥಗಳಲ್ಲಿ ಉಂಟು. ಇವೆಲ್ಲ ರಾಜ್ಯಗಳ ವಿಸ್ತೃತ ಹಾಗು ಸುಸಂಗತವಾದ ಇತಿಹಾಸವು ಗೊತ್ತಾಗಿರುವದಿಲ್ಲ. ದೊರೆತಷ್ಟು ಸಂಗತಿಗಳನ್ನು ವಿಚಾರಿಸಿದರೂ ಆಗಿನ ಪರಿಸ್ಥಿತಿಯು ಹೇಗಿತ್ತೆಂಬುದು ತಿಳಿಯುವಂತಿವೆ. **ಕಲಿಂಗ** ಅರಸರ ಬಳಿಯಲ್ಲಿ ಅರವತ್ತು ಸಾವಿರ ಮತ್ತು **ಆಂಧ್ರರ** ಬಳಿಯಲ್ಲಿ ಒಂದು ಲಕ್ಷ ಕಾಲಾಳುಗಳಿದ್ದರೆಂಬ ಸಂಗತಿಯಿಂದ ಆಗಿನವರ ಘನವಾದ ಐಶ್ವರ್ಯದ ಕಲ್ಪನೆಯು ಆಗುವಂತಿದೆ.

೨. **ಮಗಧರಾಜ್ಯ**:— ಭರತಖಂಡದ ರಾಜ್ಯಗಳಲ್ಲಿ ಪ್ರಾಚೀನ ಮಗಧರಾಜ್ಯವು ಮುಖ್ಯವಾದದ್ದು. ಮಹಾಭಾರತಕಾಲದಲ್ಲಿ **ಜರಾಸಂಧನು** ಮಗಧದ ಅರಸನಾಗಿದ್ದನು. ಅವನ ತರುವಾಯ ಮಗಧ ರಾಜ್ಯವನ್ನು ಆಳಿದ ೨೬ ಜನ ಅರಸರ ಹೆಸರುಗಳು ಮಾತ್ರ ಗೊತ್ತಾಗಿವೆ. ಕ್ರಿ. ಶ. ಪೂ. ೭ನೆಯ ಶತಮಾನದಲ್ಲಿ **ಶಿಶುನಾಗನು** ಮಗಧದ ಒಡೆಯನಾಗಿದ್ದನು. ಅಂದಿನಿಂದ ಅವನ ವಂಶಕ್ಕೆ **ಶೈಶುನಾಗ** ವಂಶವೆಂಬ ಹೆಸರುಂಟಾಯಿತು. ಈ ವಂಶದ ಐದನೆಯ ಅರಸನಾದ **ಬಿಂಬಸಾರನು** ಆಳುವಾಗ (ಕ್ರಿ. ಶ. ಪೂ. ೫೮೨-ಕ್ರಿ. ಶ. ಪೂ ೫೫೪.) ಮಹಾತ್ಮನಾದ **ಗೌತಮಬುದ್ಧನು** ಬೌದ್ಧ ಮತವನ್ನೂ **ಮಹಾವೀರವರ್ಧಮಾನನು** ಜೈನಮತವನ್ನೂ ಸ್ಥಾಪಿಸತೊಡಗಿದ್ದರು. ಬಿಂಬಸಾರನ ಮಗನಾದ **ಅಜಾತಶತ್ರುವು** ಕ್ರಿ. ಶ. ಪೂ. ೫೫೪— ಕ್ರಿ. ಶ. ಪೂ. ೫೨೭) ಈ ಇಬ್ಬರು ಸತ್ಪುರುಷರನ್ನು ಸನ್ಮಾನಿಸಿದನು. ಇವನ ಮಗನಾದ **ದರ್ಶಕನು** ಆಳುತ್ತಿರುವಾಗ (ಕ್ರಿ. ಶ. ಪೂ. ೫೨೭-ಕ್ರಿ. ಶ. ಪೂ. ೫೦೩.) **ಇರಾಣದ** ಅರಸನಾದ **ಡರಾಯುಸನು** ತನ್ನ ಸರದಾರನಾದ **ಸ್ಕಾಯುಲ್ಯಾಕ್ಸನನ್ನು** ಹಿಂದುಸ್ಥಾನದ ಮೇಲೆ ದಂಡೆತ್ತಿ ಕಳುಹಿದನು. ಈ ಸರದಾರನು ಪಂಜಾಬದಿಂದ ಸಿಂಧದ ವರೆಗಿನ ವಾಯುವ್ಯ ಸರಹದ್ದಿನ ಪ್ರದೇಶವನ್ನು ಗೆದ್ದು ಇರಾಣದ ರಾಜ್ಯಕ್ಕೆ ಸೇರಿಸಿದನು. ಆದರೆ ಮುಂದೆ ಇರಾಣದ ಅಧಿಕಾರವು ಆ ಪ್ರಾಂತದ ಮೇಲೆ ಸಾಗುವದು ಬೇಗನೆ ನಿಂತು ಹೋಯಿತು. ದರ್ಶಕನ ತರುವಾಯ **ಉದಯ, ನಂದಿನ** ಮೊದಲಾದ ಅರಸರು ಆಳಿದರು. ಈ ಶೈಶುನಾಗ ವಂಶವು ಕ್ರಿ.ಶ.ಪೂ. ೪೧೩ರಲ್ಲಿ ಮುಗ್ಗಿತು.

**೩. ಆರ್ಯ-ದ್ರವಿಡರ ಸಮ್ಮಿಶ್ರಣವು**:— ಉತ್ತರದಿಂದ ದಕ್ಷಿಣಕ್ಕೆ ಸಾಗುತ್ತ ಬಂದು ಆರ್ಯರು ಸ್ಥಿರವಾಗಿ ನೆಲೆಗೊಂಡ ಬಳಿಕ ಅವರಿಗೂ ದ್ರವಿಡರಿಗೂ ಬಳಕೆಯಾಗಹತ್ತಿತು. ಆರ್ಯಸಂಸ್ಕೃತಿಯ ವರ್ಚಸ್ಸು ದ್ರವಿಡ ಸಂಸ್ಕೃತಿಯ ಮೇಲೆ ಆಯಿತು. ದ್ರವಿಡರ ಸಂಸ್ಕೃತಿ ವಿಶೇಷಗಳನ್ನು ಆರ್ಯರು ಅನುಕರಿಸಿದರು. ಮುಂದಿನ ಕಾಲದಲ್ಲಿ ಎರಡೂ ಸಮಾಜಗಳು ಕೂಡಿಕೊಂಡು ಒಂದು ಮಿಶ್ರ ಸಮಾಜವು ಉಂಟಾಯಿತು. ಶುದ್ಧ ಆರ್ಯರು ಮತ್ತು ಶುದ್ಧ ದ್ರವಿಡರು ಎಂಬ ಭಾವನೆಯು ಕಡಿಮೆಯಾಗಹತ್ತಿತು. ಇನ್ನು ಮುಂದಿನ ಇತಿಹಾಸವನ್ನು ವಿವರಿಸುವಾಗ ಆರ್ಯಸಂಸ್ಕೃತಿ ಎಂಬದರ ಸ್ಥಳದಲ್ಲಿ ಹಿಂದು ಸಂಸ್ಕೃತಿ ಎಂದು ಅನ್ನುವದು ಯುಕ್ತವೆನಿಸುತ್ತದೆ. ಏಕಂದರೆ ಆರ್ಯ ಮತ್ತು ದ್ರವಿಡ ಈ ಎರಡೂ ಸಂಸ್ಕೃತಿಗಳ ಶುದ್ಧಸ್ವರೂಪವು ಈ ಕಾಲದಿಂದ ಅಡಗಲಾರಂಭಿಸಿತು.

**೪. ಆ ಕಾಲದ ಸಮಾಜಸ್ಥಿತಿ**:— ಆರ್ಯರು ಇಡೀ ದೇಶದಲ್ಲಿ ಪಸರಿಸಿದ ನಂತರ ಇತರರೊಡನೆ ಅವರ ಶರೀರಸಂಬಂಧಗಳು ಆಗತೊಡಗಿದವು. ಸಮಾಜದಲ್ಲಿ ಎಷ್ಟೋ ತೊಡಕಿನ ಪ್ರಸಂಗಗಳುಂಟಾಗಹತ್ತಿದವು. ಶುದ್ಧ ಆರ್ಯರು ತಾವು ಇತರರಿಗಿಂತ ಶ್ರೇಷ್ಠರೆಂದು ತಿಳಿಯಹತ್ತಿ ಉಳಿದವರಿಂದ ಅಗಲಿ ಇರಹತ್ತಿದರು. ರಕ್ತದ ಶುದ್ಧತೆ-ಅಶುದ್ಧತೆಗಳ ಹೆಚ್ಚುಕಡಿಮೆ ಪ್ರಮಾಣದಂತೆ ಶ್ರೇಷ್ಠತೆ-ಕನಿಷ್ಠತೆಗಳು ಗೊತ್ತಾಗಹತ್ತಿದವು. ಸಮಾಜದಲ್ಲಿ ವಿಷಮತೆಯು ಉಂಟಾಗಿ ಜಾತಿಭೇದವು ಹುಟ್ಟಿತು. ಗುಣಕರ್ಮಗಳನ್ನು ಅನುಸರಿಸಿ ಉಂಟಾಗಿದ್ದ ವರ್ಣವ್ಯವಸ್ಥೆಯು ಜಾತಿಭೇದದ ಬಲೆಗೆ ಸಿಕ್ಕು ವರ್ಣಗಳು ಸ್ವತಂತ್ರ ಜಾತಿಗಳಾದವು. ಬರಬರುತ್ತ ಜಾತಿಜಾತಿಗಳಲ್ಲೂ ಒಳಜಾತಿಗಳು ಉಂಟಾಗುತ್ತ ನಡೆದವು. ಈ ಸ್ಥಿತ್ಯಂತರವು ಒಮ್ಮೆಲೆ ಆಗಿರುವದಿಲ್ಲ.

**೫. ಬೌದ್ಧಿಕ ಪ್ರಗತಿ**:— ಈ ಕಾಲದಲ್ಲಿಯೂ ಹೊಸ ಹೊಸ ಶೋಧಗಳೂ ಗ್ರಂಥರಚನೆಯೂ ಆಗುತ್ತಲೇ ಇದ್ದವು. ಭಾಷೆಯ ವಿಷಯದಲ್ಲಿ ಆರ್ಯರ ಲಕ್ಷ್ಯವು ವಿಶೇಷವಾಗಿತ್ತು. ಸಮಾಜವು ಬೆಳೆಯುತ್ತಲೂ ಉದ್ಯೋಗ ವ್ಯವಹಾರಗಳು ಹೆಚ್ಚುತ್ತಲೂ ನಡೆದ ಹಾಗೆ ಭಾಷೆಯು

ಹೊಸ ರೂಪವನ್ನು ಹೊಂದಹತ್ತಿತು. ಪ್ರಾಚೀನ ವೇದಕಾಲದ ಭಾಷೆಯು ತಿಳಿಯುವುದು ಕಠಿಣವಾಯಿತು. ಇದಕ್ಕಾಗಿ **ಯಾಸ್ಕನು, ನಿರುಕ್ತ** ಎಂಬ ಶಬ್ದಕೋಶವನ್ನು ರಚಿಸಿದನು. **ಪಾಣಿನಿ** ಎಂಬ ವಿಖ್ಯಾತನಾದ ವಿದ್ವಾಂಸನು **ಅಷ್ಟಾಧ್ಯಾಯಿ** ಎಂಬ ಸಂಸ್ಕೃತ ವ್ಯಾಕರಣಗ್ರಂಥವನ್ನು ರಚಿಸಿದನು ಈತನ ಕಾಲವು ಕ್ರಿ. ಶ. ಪೂ. ೮ನೆಯ ಶತಕವೆಂದು ಅನುಮಾನವದೆ. ಕ್ರಿ. ಶ. ಪೂ. ೪ನೆಯ ಶತಕದಲ್ಲಿ **ವರರುಚಿ** (**ಕಾತ್ಯಾಯನ**) ಎಂಬವನೂ, ಕ್ರಿ ಶ. ಪೂ. ೨ನೆಯ ಶತಕದಲ್ಲಿ **ಪತಂಜಲಿ** ಎಂಬ ಮುನಿಯೂ ವ್ಯಾಕರಣ ಗ್ರಂಥಗಳನ್ನು ರಚಿಸಿದರು ವ್ಯಾಕರಣದ ಹೊರತಾಗಿ **ಅಂಕಗಣಿತ, ಬೀಜಗಣಿತ, ಜ್ಯೋತಿಷ, ಆಯುರ್ವೈದ್ಯಕ** ಮುಂತಾದ ಶಾಸ್ತ್ರಗಳ ಸಂಬಂಧದ ಗ್ರಂಥಗಳು ಹುಟ್ಟಿದವು. **ಕಪಿಲ** ಮುನಿಯು **ಸಾಂಖ್ಯ** ಶಾಸ್ತ್ರವನ್ನು ಬರೆದನು. **ಗೌತಮ-ಕಣಾದರ** ನ್ಯಾಯಶಾಸ್ತ್ರಗಳು ಪ್ರಸಿದ್ಧವಾದವು. **ಜೈಮಿನಿಯ ಪೂರ್ವಮೀಮಾಂಸೆ** ಎಂಬ ಧರ್ಮಶಾಸ್ತ್ರಗ್ರಂಥವೂ **ಬಾದರಾಯಣನ ಉತ್ತರಮೀಮಾಂಸೆ** ಎಂಬ ಬ್ರಹ್ಮಜ್ಞಾನ ವಿಷಯದ ಗ್ರಂಥವೂ ಸಿದ್ಧವಾದವು. ಆರ್ಯರು ತತ್ವಜ್ಞಾನದ ಸಂಬಂಧವಾಗಿ ಅತಿ ಗಹನವಾದ ವಿಚಾರ ಮಾಡಹತ್ತಿದರು. ಬಿಹಾರಪ್ರಾಂತದಲ್ಲಿಯೂ, ಹಿಮಾಲಯದ ಅಡಿಯಲ್ಲಿರುವ ತೆರಾಯಿ ಎಂಬಲ್ಲಿಯೂ ನಿಸರ್ಗ ರಮಣೀಯವಾದ ಕೆಲವು ಅರಣ್ಯಗಳಿರುವವು. ಇವುಗಳಲ್ಲಿ ಜೇನು, ಹಣ್ಣು-ಹಂಪಲ, ಗಡ್ಡೆ-ಬೇರು ಮುಂತಾದ ಸ್ವಾಭಾವಿಕ ಆಹಾರಗಳು ಸಮೃದ್ಧವಾಗಿ ದೊರೆಯುವವು. ಏಕಾಂತಚಿತ್ತದಿಂದ ವಿಚಾರಮಗ್ನರಾಗಿರಲಿಕ್ಕೂ ಪ್ರಪಂಚದಲ್ಲಿ ತಾಪಗೊಂಡವರು ವಿಶ್ರಾಂತಿಯನ್ನು ಹೊಂದಲಿಕ್ಕೂ ತಪಸ್ಸನ್ನಾಚರಿಸಲಿಕ್ಕೂ ತಕ್ಕವಾದ ಅನೇಕ ಸ್ಥಳಗಳು ಈ ಅರಣ್ಯಗಳಲ್ಲಿರುವವು. ಪ್ರಾಚೀನಕಾಲದಲ್ಲಿ ಎಷ್ಟೋ ಸತ್ಪುರುಷರು, ಕವಿಗಳು, ತತ್ವಜ್ಞಾನಿಗಳು ಈ ತಪೋಭೂಮಿಗಳನ್ನು ಆಶ್ರಯಿಸಿ, ತಮ್ಮ ಬುದ್ಧಿ-ಜ್ಞಾನ-ವೈರಾಗ್ಯಗಳಿಂದ ಜಗತ್ತಿಗೆ ಮಾನ್ಯರಾಗಿರುವರು.

---

# ೮ ನೆಯ ಪಾಠ.

## ಬೌದ್ಧ ಮತ್ತು ಜೈನ ಧರ್ಮಗಳು.



**೧. ಬೌದ್ಧಧರ್ಮದ ಸ್ಥಾಪನೆಯ ಕಾಲದ ಸ್ಥಿತಿ**:— ಆರ್ಯರು ತಮ್ಮ ಸಂಸ್ಕೃತಿಯನ್ನು ಹೆಚ್ಚು ಹೆಚ್ಚು ಹಬ್ಬಿಸುತ್ತ ನಡೆದ ಹಾಗೆಲ್ಲ ಅದರ ಮೊದಲಿನ ಶುದ್ಧ ರೂಪದಲ್ಲಿ ಕೆಲವು ದೋಷಗಳು ಅಡಕವಾದವು. ಕ್ಷುಲ್ಲಕವೆನಿಸಿದ ದೋಷಗಳು ಕ್ರಮದಿಂದ ಬೆಳೆಯಲಾರಂಭಿಸಿದವು. ಧರ್ಮಸಂಬಂಧವಾದ ಯಜ್ಞಯಾಗಗಳು ಅತಿರೇಕಕ್ಕೆ ಆಗಹತ್ತಿದವು. ಕರ್ಮದ ಆಡಂಬರವೇ ಹೆಚ್ಚಾಗಿ ಧರ್ಮತತ್ವಗಳ ಕಡೆಗೆ ದುರ್ಲಕ್ಷ್ಯವಾಗಹತ್ತಿತು. ಯಜ್ಞದಿಂದ ಸದ್ಗತಿಯುಂಟಾಗುವದೆಂಬ ತಿಳುವಳಿಕೆಯೇ ಸ್ಥಿರವಾಗಿ ಶುದ್ಧಾಚರಣೆಯ ಕಡೆಗೆ ಅಲಕ್ಷ್ಯವಾಗಹತ್ತಿತು. ಇವೆಲ್ಲ ಸಂಗತಿಗಳು ವಿಚಾರವಂತರಲ್ಲಿ ಅಸಮಾಧಾನವನ್ನು ಉಂಟುಮಾಡಿದವು.

ಪ್ರಾಣಹಿಂಸೆ, ಜಾತಿಭೇದ ಪಕ್ಷಪಾತಬುದ್ಧಿಯಿಂದ ಮಾಡಿದ ನಿಯಮಗಳು, ಆಚಾರದ ಡಾಂಭಿಕತನ, ಧರ್ಮದ ನಿಜತತ್ವಗಳ ಕಡೆಗೆ ಆಗಹತ್ತಿದ ಅಲಕ್ಷ್ಯ ಇವುಗಳ ಮೂಲಕ ಜನಸಮಾಜವು ಗೊಂದಲದಲ್ಲಿ ಸಿಲುಕಿತು. ಇಂಥ ವಿಚಿತ್ರ ಸ್ಥಿತಿಯು ಇರುವಾಗ **ಗೌತಮ** ಮುನಿಯು ಅವತರಿಸಿದನು.

**೨. ಗೌತಮ ಬುದ್ಧ**:— **ಶಾಕ್ಯ**ರ ರಾಜಧಾನಿಯಾದ **ಕಪಿಲವಸ್ತು** ಎಂಬಲ್ಲಿ **ಶುದ್ಧೋದನ**ನೆಂಬ ಅರಸನು ಆಳುತ್ತಿದ್ದನು. ಈ ಶುದ್ಧೋದನನ ಮಗನೇ **ಸಿದ್ಧಾರ್ಥನು.** ತಂದೆಯು ಮಗನಿಗೆ ಉತ್ತಮವಾದ ಶಿಕ್ಷಣವನ್ನು ಕೊಟ್ಟನು. ಧನುರ್ವಿದ್ಯೆಯಲ್ಲಿ ನಿಪುಣನಾದ ಸಿದ್ಧಾರ್ಥನು **ಯಶೋಧರೆ**ಯೆಂಬ ರಾಜಕನ್ಯೆಯನ್ನು ಕಠಿಣವಾದ ಪಣವನ್ನು ಗೆದ್ದು ಲಗ್ನವಾದನು. ಸುಖೋಪಭೋಗಗಳನ್ನು ಅನುಭವಿಸುವ ಈತನು ವಿಲಾಸದಲ್ಲಿಯೇ ಮಗ್ನನಾಗಿರುವದು ಸ್ವಾಭಾವಿಕವಾಗಿತ್ತು. ಆದರೆ ಸಿದ್ಧಾರ್ಥನ ಮನಸ್ಸು ವಿಲಾಸಕ್ಕೂ ಸುಖಭೋಗಗಳಿಗೂ ಮೆಚ್ಚಲಿಲ್ಲ. ಐಹಿಕ

ವಿಚಾರಗಳ ಕಡೆಗೆ ಮನಸ್ಸು ಹಾಕದೆ ಎಲ್ಲ ಸಂಗತಿಗಳನ್ನು ಪಾರಮಾರ್ಥಿಕ ದೃಷ್ಟಿಯಿಂದ ಸೂಕ್ಷ್ಮವಾಗಿ ನಿರೀಕ್ಷಿಸತೊಡಗಿದನು. ಯಜ್ಞಗಳಿಂದ ಮೋಕ್ಷವು ಉಂಟಾಗುವದೋ? ಯಜ್ಞದಲ್ಲಾಗುವ ಪ್ರಾಣಿಹಿಂಸೆಯು ದೇವರಿಗೆ ಪ್ರಿಯವಾಗಬಹುದೇ? ಸಾಮಾಜಿಕ ವಿಷಮತೆಯು ಅನ್ಯಾಯಕರವಲ್ಲವೇ? ಇವೇ ಮುಂತಾದ ಪ್ರಶ್ನೆಗಳಿಂದ ಆತನ ಮನಸ್ಸು ವ್ಯಗ್ರವಾಯಿತು. ಮನಸ್ಸಿನ ಕಳವಳವು ಹೆಚ್ಚಿತು. ಒಂದು ದಿನ ಒಂದು ಹೆಣವನ್ನೂ, ವ್ಯಾಧಿಯಿಂದ ಬಳಲುವ ಒಬ್ಬ ರೋಗಿಯನ್ನೂ ನೋಡಿ '**ಈ ದೇಹವು ನಶ್ವರವು**' ಎಂದು ಮನಗಂಡು ರಾಜ್ಯವನ್ನೂ, ಹೆಂಡಿರು-ಮಕ್ಕಳನ್ನೂ ಅಗಲಿ ಅರಣ್ಯವನ್ನು ಸೇರಿದನು. ಅಲ್ಲಿ ಆರು ವರ್ಷಗಳ ವರೆಗೆ ತಪಸ್ಸನ್ನಾಚರಿಸಿದನು. ಬಳಿಕ, ಉಪವಾಸಾದಿ ದೇಹದಂಡನೆಗಳಿಂದ ಜ್ಞಾನಪ್ರಾಪ್ತಿಯು ಆಗದೆಂದು ತಿಳಿದು ತಪಾಚರಣೆಯನ್ನು ಬಿಟ್ಟುಬಿಟ್ಟನು. ಮುಂದೆ ಅವನು ಗಯೆಯ ಬಳಿಯ ಅರಣ್ಯದಲ್ಲಿ ಒಂಟಿಗನಾಗಿ ವಾಸಿಸಹತ್ತಿದನು. ಹೀಗಿರುವಾಗ ಒಂದು ದಿನ ಆತನು ಒಂದು ಅಶ್ವತ್ಥವೃಕ್ಷದ ಬುಡದಲ್ಲಿ ವಿಚಾರಮಗ್ನನಾಗಿ ಕುಳಿತಿರುವಾಗ ಒಮ್ಮೆಲೆ ಆತನಿಗೆ ದಿವ್ಯಜ್ಞಾನದ ಪ್ರಾಪ್ತಿಯಾಯಿತು. **ಈ ಅಶ್ವತ್ಥ** ವೃಕ್ಷಕ್ಕೆ **ಬೋಧಿವೃಕ್ಷ**ವೆಂದೂ ಆ ಸ್ಥಳಕ್ಕೆ * **ಬುದ್ಧಗಯೆ**ಯೆಂದೂ ಹೆಸರುಂಟಾಯಿತು. ಬುದ್ಧನು ಆ ಬಳಿಕ **ಕಾಶಿಯ** ನೆರೆಯಲ್ಲಿಯ **ಸಾರನಾಥ** ಎಂಬಲ್ಲಿ **ಮೃಗದಾವ** ಎಂಬ ಉಪವನಗಳಲ್ಲಿದ್ದುಕೊಂಡು ಜನರಿಗೆ ಉಪದೇಶ ಮಾಡತೊಡಗಿದನು. ಆಗ ಆತನು ಮೂವತ್ತಾರು ವರ್ಷದವನಿದ್ದನು. **ಕೋಸಲದ ಪ್ರಸೇನಜಿತ**ನೂ ಮಗಧದ ಬಿಂಬಿಸಾರನೂ ಗೌತಮಬುದ್ಧನ ಈ ಹೊಸ ಧರ್ಮವನ್ನು ಸೇರಿದರು. ರಾಜಾಶ್ರಯವು ದೊರೆತದರಿಂದ ಬುದ್ಧಧರ್ಮ ಪ್ರಸಾರಕ್ಕೆ ಮತ್ತಿಷ್ಟು ಸಹಾಯವಾಯಿತು. **ನೇಪಾಳ**ದ ನೆರೆಯ **ಕುಶಿ** ಎಂಬ ಪಟ್ಟಣದಲ್ಲಿ ಗೌತಮ ಬುದ್ಧನು ತನ್ನ ವಯಸ್ಸಿನ ೮೦ನೆಯ ವರ್ಷ ಎಂದರೆ, ಕ್ರಿ. ಶ. ಪೂ. ೪೮೭ರಲ್ಲಿ ದೇಹವಿಟ್ಟನು. ಅಷ್ಟರಲ್ಲಿ ಅಸಂಖ್ಯ ಜನರು ಬೌದ್ಧಧರ್ಮಕ್ಕೆ ಸೇರಿದ್ದರು. ಶ್ರೀಕೃಷ್ಣ, ಯೇಸುಕ್ರಿಸ್ತ, ಮಹಮ್ಮದ

---

* ಸಿದ್ಧಾರ್ಥನ ಉಪದೇಶವನ್ನು ಕೇಳಿ ಬಹು ಜನರು ಅವನ ಶಿಷ್ಯರಾದರು. ಅಂದಿನಿಂದ ಸಿದ್ಧಾರ್ಥನಿಗೆ 'ಬುದ್ಧ' ಎಂದರೆ ಜ್ಞಾನಿ ಎಂಬ ಹೆಸರುಂಟಾಯಿತು.

ಪೈಗಂಬರ, ಬಸವೇಶ್ವರ ಮೊದಲಾದವರಂತೆಯೆ ಗೌತಮ ಬುದ್ಧನಾದರೂ ಮಹಾತ್ಮರಲ್ಲಿ ಎಣಿಸಲ್ಪಡುವನು.



ಗಯೆಯಲ್ಲಿದ್ದ ಬುದ್ಧನ ಗುಡಿ.

೩. **ಬೌದ್ಧಧರ್ಮದ ಪ್ರಸಾರ**:— ಬುದ್ಧನ ಮರಣದ ನಂತರ ಆತನ ಶಿಷ್ಯರು ರಾಜಗೃಹದಲ್ಲಿ ಒಂದು ಸಭೆಯನ್ನು ನೆರೆಯಿಸಿ, ಬುದ್ಧನ ವಚನಗಳನ್ನು ಸಂಗ್ರಹಿಸಿದರು. ಈ ಸಂಗ್ರಹಕ್ಕೆ **ಪೀಠಕ**ಗಳೆಂಬ ಸಂಜ್ಞೆ. ಈ ಪೀಠಕಗಳು ಮೂರು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿವೆ. ಮುಂದೆ ಬೌದ್ಧ ಧರ್ಮವು ಹಿಂದುಧರ್ಮದಿಂದ ಭಿನ್ನವಾಗಿ ಕಾಣಹತ್ತಿ ಭರದಿಂದ ಹಬ್ಬ

ತೊಡಗಿತು. ಕಾಲಕಾಲಕ್ಕೆ ಬೌದ್ಧ ಭಿಕ್ಷುಗಳು ತಮ್ಮ ಧರ್ಮಸಭೆಯನ್ನು ಕರೆದು ತೊಡಕುಳ್ಳ ಪ್ರಶ್ನೆಗಳನ್ನು ಚರ್ಚಿಸಿ ಸಂಶಯಗಳನ್ನು ಪರಿಹರಿಸಿ ಕೊಳ್ಳುವರು. ಮೊದಲನೆಯ ಸಭೆಯಾದ ನಂತರ ನೂರು ವರ್ಷಕ್ಕೆ ಎರಡನೆಯ ಧರ್ಮಸಭೆಯು ನೆರೆಯಿತು. ಮುಂದೆ **ಅಶೋಕನು** ಮೂರನೆಯ ಮಹಾಸಭೆಯನ್ನು ಕೂಡಿಸಿದನು. ಹಿಂದುಸ್ಥಾನದಲ್ಲಿಯೂ ಹೊರದೇಶಗಳಲ್ಲಿಯೂ ಬೌದ್ಧಧರ್ಮವು ಭರದಿಂದ ಪ್ರಸಾರಗೊಂಡಿತು. ಕ್ರಿ ಶಕದ ೧ನೆಯ ಶತಮಾನದಲ್ಲಿ **ಕನಿಷ್ಕನು** ೪ನೆಯ ಸಭೆಯನ್ನು ಕೂಡಿಸಿ ಬೌದ್ಧಧರ್ಮ ಗ್ರಂಥಗಳನ್ನು ಸಂಗ್ರಹಿಸಿದನು. ಈ ಧರ್ಮಗ್ರಂಥಗಳೆಲ್ಲ ಬಹುತರ **ಪಾಲೀ** ಭಾಷೆಯಲ್ಲಿಯೇ ಬರೆಯಲ್ಪಟ್ಟಿವೆ. ಬೌದ್ಧಧರ್ಮಾನುಯಾಯಿಗಳು ಸದ್ಯಕ್ಕೆ ಹಿಂದುಸ್ಥಾನದಲ್ಲಿರದಿದ್ದರೂ **ತಿಬೇಟ, ಚೀನ, ಬ್ರಹ್ಮದೇಶ, ಜಪಾನ, ಸಿಲೋನ** ಈ ದೇಶಗಳಲ್ಲಿ ಈಗ ಬೌದ್ಧಧರ್ಮವೇ ಮುಖ್ಯವಾಗಿದೆ. ಗ್ರೀಸ ದೇಶದ ಅರಸನಾದ **ಮಿಲಿಂದನು** ಈ ಧರ್ಮವನ್ನು ಸ್ವೀಕರಿಸಿದ್ದನು ಕ್ರಿ ಶ ೨ನೆಯ ಶತಕದಲ್ಲಿ ಈ ಧರ್ಮದಲ್ಲಿ **ಮಹಾಯಾನ, ಹೀನಯಾನ** ಎಂಬ ಎರಡು ಪಂಗಡಗಳು ಉಂಟಾದವು. ಮಹಾಯಾನ ಪಂಥದವರು ಬುದ್ಧನ ಮೂರ್ತಿಯನ್ನು ಪೂಜಿಸಹತ್ತಿದರು.

**೪. ಬೌದ್ಧಧರ್ಮದ ತತ್ವಗಳು** :— ಬೌದ್ಧ ಮತ್ತು ಜೈನ ಧರ್ಮಗಳು ಹಿಂದುಧರ್ಮದಿಂದ ತೀರ ಸ್ವತಂತ್ರವಾದ ಹೊಸ ಧರ್ಮಗಳೆಂದು ತಿಳಿಯುವ ಕಾರಣವಿಲ್ಲ ಹಿಂದುಧರ್ಮದಲ್ಲಿಯ ತಮ್ಮ ಮನಸ್ಸಿಗೆ ಒಪ್ಪಿದ ತತ್ವಗಳನ್ನೇ ಬುದ್ಧ ಮತ್ತು ಮಹಾವೀರರು ಜನರಿಗೆ ಬೋಧಿಸಿರುವರು. ಗೌತಮ ಬುದ್ಧನಂತೂ ಉಪನಿಷತ್ತುಗಳಲ್ಲಿಯ ತತ್ವಗಳನ್ನೇ ಆಶ್ರಯಿಸಿರುವನು. ಯಜ್ಞಯಾಗಗಳ ಮೇಲೂ ವೇದಗಳಮೇಲೂ ಬುದ್ಧನ ಕಟಾಕ್ಷನಿತ್ತು.

ಭೂತದಯೆ, ಮನೋನಿಗ್ರಹ, ಅಹಿಂಸೆ ಇವು ಬುದ್ಧಮತದ ಮುಖ್ಯ ತತ್ವಗಳು. ಇವನ್ನು ಆಚರಿಸಿ ಯಾವನೇ ಆಗಲಿ ನಿರ್ವಾಣವನ್ನು (ಮುಕ್ತಿಯನ್ನು) ಹೊಂದಬಹುದು. ಆಶೆಯನ್ನು ತ್ಯಜಿಸಿ ನಿರ್ವಾಣವನ್ನು ಹೊಂದುವದಕ್ಕಾಗಿ ಎಂಟು ತರದ ಸಾಧನಗಳು ಹೇಳಲ್ಪಟ್ಟಿವೆ. ಈ ಅಷ್ಟವಿಧ ಸಾಧನಗಳಲ್ಲಿ ಸದಿಚ್ಛೆ, ಸತ್‌ಶ್ರದ್ಧೆ, ಸದ್ವರ್ತನ, ಸದ್ವಚನ, ಸತ್ಪರಿಶ್ರಮ,

ಸಚ್ಚಿಂತನ, ಸನ್ನಿಶ್ಚಯ ಎಂಬ ಎಂಟು ಉತ್ತಮ ನೀತಿ ತತ್ವಗಳು ಅಡಕವಾಗಿರುವವು.

೫. **ಜೈನಧರ್ಮ :— ( ಮಹಾವೀರ ವರ್ಧಮಾನ )**– ಜೈನಮತದ ಉದ್ಧಾರಕನಾದ ಮಹಾವೀರ ವರ್ಧಮಾನನು ಕ್ರಿ. ಶ. ಪೂ. ೫೪೭ನೆಯ ವರ್ಷ **ವೈಶಾಲಿಯ ಲಿಚ್ಛವಿ** ಎಂಬ ರಾಜವಂಶದಲ್ಲಿ ಹುಟ್ಟಿದನು. ಚಿಕ್ಕಂದಿನಲ್ಲಿಯೇ ಮಹಾವೀರನು ವಿಚಾರಮಗ್ನನೂ, ವಿಷಯಪರಾಙ್ಮುಖನೂ ಆಗಿದ್ದನು. ಜನರನ್ನು ಉಪದೇಶಿಸುತ್ತ ಸಂಚರಿಸುವ **ಪಾರ್ಶ್ವನಾಥ**ನೆಂಬ ಸತ್ಪುರುಷನ ಶಿಷ್ಯನಾಗಿ, ಗುರುವಿನ ತರುವಾಯ ತಾನೇ ಉಪದೇಶ ಕಾರ್ಯವನ್ನು ಕೈಕೊಂಡನು. ಮುಂದೆ ಹೆಚ್ಚು ವಿದ್ಯೆಯನ್ನು ಸಂಪಾದಿಸಿ ಪ್ರಪಂಚವನ್ನು ತ್ಯಾಗಮಾಡಿ ಅಲ್ಲಲ್ಲ ಸಂಚರಿಸಿ ಸಾಧುಸಮಾಗಮದಿಂದ ಜ್ಞಾನವನ್ನು ಹೊಂದಿದನು ಮತ್ತು ವಯಸ್ಸಿನ ನಾಲ್ವತ್ತೆರಡನೆಯ ವರ್ಷ ಜೈನಮತದ ತತ್ವಗಳನ್ನು ಜನರಿಗೆ ಬೋಧಿಸಹತ್ತಿದನು ಇವನ ಪ್ರಯತ್ನದಿಂದ ಜೈನಮತದ ಪ್ರಸಾರವು ಒತ್ತರದಿಂದ ಆಗಹತ್ತಿತು. ಮಹಾವೀರನು ಕ್ರಿ. ಶ. ಪೂ. ೪೬೭ರಲ್ಲಿ ದೇಹವಿಟ್ಟನು.

೬. **ಜೈನಧರ್ಮದ ತತ್ವಗಳು**:— ಅಹಿಂಸೆಯು ಜೈನಧರ್ಮದ ಮುಖ್ಯ ತತ್ವವು. ಸದಾಚರಣೆಯಿಂದ ಇದ್ದು ಇಂದ್ರಿಯಗಳನ್ನು ಗೆಲಿದು ಮೋಕ್ಷವನ್ನು ಸಂಪಾದಿಸುವದು, ಈ ಧರ್ಮದ ಧ್ಯೇಯವು. ಕೇವಲ ಸಾಧುವೃತ್ತಿಯನ್ನು ಸ್ವೀಕರಿಸದೆ ಪ್ರಪಂಚದಲ್ಲಿದ್ದುಕೊಂಡು ಜೈನತತ್ವಗಳಂತೆ ನಡೆಯುವವರು **ಶ್ರಾವಕ**ರೆನಿಸಿದರು ಜೈನಧರ್ಮದಲ್ಲಿ **ದಿಗಂಬರ, ಶ್ವೇತಾಂಬರ** ಎಂಬ ಎರಡು ಒಳಪಂಥಗಳುಂಟು ಉಪವಾಸದಿಂದ ಶರೀರ, ಮನಸ್ಸುಗಳನ್ನು ನಿರ್ಮಲವಾಗಿಟ್ಟುಕೊಂಡು ಎಲ್ಲ ಜಗತ್ತನ್ನೇ ಸಮದೃಷ್ಟಿಯಿಂದ ಪ್ರೀತಿಸುವದು ವರ್ಧಮಾನ ಮಹಾವೀರನ ಉಪದೇಶದ ಗುಟ್ಟಾಗಿರುವದು.

೭. **ಜೈನ ಧರ್ಮದ ಪ್ರಸಾರ.**— ಮಹಾವೀರನು ದೇಹವಿಡುವಾಗ ಸುಮಾರು ಹದಿನಾಲ್ಕು ಸಾವಿರ ಜನರು ಜೈನಮತಾನುಯಾಯಿಗಳಾಗಿದ್ದರು. ಮುಂದೆ **ಮೌರ್ಯವಂಶದ ಚಂದ್ರಗುಪ್ತನು** ಜೈನತತ್ವಗಳನ್ನು ಸಂಗ್ರಹಿಸಿದನು. ಇವನ ಕಾಲದಲ್ಲಿ, **ಭದ್ರಬಾಹು** ಎಂಬ ಪಂಡಿತನು ಮುಂದೆ

ಭಯಂಕರವಾದ ಬರಬೀಳುವದೆಂಬದನ್ನು ಕಂಡು ಜೈನಸಾಧುಗಳ ಸಂಘ ದೊಂದಿಗೆ ದಕ್ಷಿಣ ಹಿಂದುಸ್ಥಾನಕ್ಕೆ ಬಂದನು ಇವನ ಉಪದೇಶದಿಂದ ದಕ್ಷಿಣದಲ್ಲಿದ್ದ ಜೈನಮತವೂ ಹೆಚ್ಚು ಬೆಳವಣಿಗೆ ಹೊಂದಿತು. ಜೈನಧರ್ಮಾನು ಯಾಯಿಗಳು ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿ ಇರುವರು. ಇವರು ವ್ಯಾಪಾರದಿಂದ ಧನಿಕರಾಗಿದ್ದು ಸಾತ್ವಿಕರೂ ಪರೋಪಕಾರಿಗಳೂ ಎಂದು ಹೆಸರಾಗಿರುವರು. ಜೈನರು ಅಲ್ಲಲ್ಲಿ ಕಟ್ಟಿಸಿದ ಭವ್ಯವಾದ ಮಂದಿರ, ಧರ್ಮಶಾಲೆ, ಔಷಧಾಲಯಗಳು ಇವು ಅವರ ಪರೋಪಕಾರ, ದಾತೃತ್ವ ಇವುಗಳ ಸಾಕ್ಷಿಗಳಾಗಿವೆ. ಹಿಂದುಸ್ಥಾನದ ಹೊರಗೆ ಜೈನಧರ್ಮದ ಪ್ರಸಾರ ವಾಗಲಿಲ್ಲ ಬೌದ್ಧಧರ್ಮವು ಹೊರದೇಶಗಳಲ್ಲಿ ಬಹು ದೊಡ್ಡ ಜನಾಂಗದ ಧರ್ಮವೆನಿಸಿದ್ದರೂ ಹಿಂದುಸ್ಥಾನದಲ್ಲಿ ಜನಿಸಿದಂಥ ಆ ಧರ್ಮಕ್ಕೆ ಇಲ್ಲಿಯೇ ನೆಲೆಯೂರಿ ನಿಲ್ಲಲು ಅವಕಾಶವು ಉಳಿಯಲಿಲ್ಲ! ಆದರೆ ಜೈನಧರ್ಮವು ಮಾತ್ರ ಸ್ಥಿರವಾಗಿ ಉಳಿದದೆ!! ಮುಂದಿನ ಕಾಲದಲ್ಲಿ ಹಿಂದುಧರ್ಮಿಗಳು ಕುಶಲತನದಿಂದ, ಬುದ್ಧ ಧರ್ಮದವರ ಉತ್ತಮವಾದ ತತ್ವಗಳನ್ನು ಸ್ವೀಕ ರಿಸಿ, ಲೋಕಪ್ರಿಯವಾದ **ಭಾಗವತ** ಧರ್ಮವನ್ನು ಜನರಿಗೆ ಬೋಧಿಸಿ, ಪ್ರಚಂಡವಾದ ಚಟುವಟಿಕೆಯನ್ನು ಮಾಡಿ ಬೌದ್ಧಧರ್ಮಕ್ಕೆ ನಿಲ್ಲಲು ಆಧಾರವಿಲ್ಲದ ಹಾಗೆ ಮಾಡಿದರು. ಜೈನಧರ್ಮದಿಂದ ಹಿಂದು ಧರ್ಮಕ್ಕೆ ವಿಶೇಷ ಬಾಧೆ ತಟ್ಟದೆಯಿದ್ದುದರಿಂದಲೂ ಜೈನಧರ್ಮದ ಸಾತ್ವಿಕಸ್ವರೂಪವು ಜನಸಾಮಾನ್ಯರಿಗೆ ಪ್ರಿಯವಾದುದರಿಂದಲೂ ಈ ಧರ್ಮವು ಈ ದೇಶದಲ್ಲಿ ಉಳಿದುಕೊಂಡಿದೆ

## ೯ ನೆಯ ಪಾಠ.

**ಸಿಕಂದರನ ದಾಳಿ.** ಕ್ರಿ. ಶ. ಪೂ. ೩೨೭ ರಿಂದ ಕ್ರಿ. ಶ. ಪೂ ೩೨೫.



**೧. ನಂದವಂಶ:—** ಶೈಶುನಾಗವಂಶವು ಕ್ರಿ. ಶ. ಪೂ. ೪೧೩ರಲ್ಲಿ ಮುಗಿದು ಹೋದ ಬಳಿಕ ನಂದರು ಮಗಧರಾಜ್ಯವನ್ನು ಆಳಹತ್ತಿದರು.

**ಈ** ವಂಶದ ಒಂಬತ್ತು ಜನ ಅರಸರು ಸುಮಾರು **ತೊಂಬತ್ತು** ವರ್ಷಗಳ ವರೆಗೆ ರಾಜ್ಯವಾಳಿದರು. ಕಡೆಗೆ ಚಂದ್ರಗುಪ್ತನು **ಚಾಣಕ್ಯ**ನೆಂಬ ಪ್ರಸಿದ್ಧನಾದ ಮುತ್ಸದ್ದಿಯ ನೆರವಿನಿಂದ ಕ್ರಿ. ಶ. ಪೂ. ೩೨೧ರಲ್ಲಿ ಮೌರ್ಯ ದೇಶದ ಮೇಲೆ ದಂಡೆತ್ತಿ ಹೋಗಿ **ಧನಾನಂದ**ನೆಂಬ ನಂದರಾಜನನ್ನು ಕೊಂದು ಆ ವಂಶವನ್ನು ನಿರ್ಮೂಲ ಮಾಡಿದನು. ಬಳಿಕ ಚಂದ್ರಗುಪ್ತನು ಮಗಧ ರಾಜ್ಯದ ಒಡೆಯನಾದನು.

**೨. ಅಲೆಕ್‌ಝಾಂಡರನ ಅಥವಾ ಸಿಕಂದರನ ಉದಯ**:— ಗ್ರೀಸದ ಉತ್ತರಕ್ಕಿರುವ **ಮಾಸಿಡೋನಿಯ**ದಲ್ಲಿ **ಫಿಲಿಪ**ನೆಂಬ ಪರಾಕ್ರಮಿಯಾದ ಅರಸನು ಆಳುತ್ತಿದ್ದನು. ಇವನ ಮಗನೇ ಜಗದ್ವಿಖ್ಯಾತನಾದ **ಅಲೆಕ್‌ಝಾಂಡರ** ಅಥವಾ **ಸಿಕಂದರ**ನು. ತಂದೆಯ ತರುವಾಯ ಸಿಕಂದರನು ಪಟ್ಟಕ್ಕೆ ಬಂದನು. ಇವನು ಶೂರನೂ, ಸಾಹಸಿಯೂ, ಚತುರನೂ ಆದ ಸೇನಾಪತಿಯಾಗಿದ್ದನು. ಜಗತ್ತನ್ನೆಂ ಗೆಲೆಯುವ ಅಭಿಲಾಷೆಯು ಇವನದಿದ್ದಿತು. **ಗ್ರೀಸ್**, ಇರಾಣ ದೇಶಗಳನ್ನು ಗೆದ್ದುಕೊಂಡ ಬಳಿಕ ಇವನು **ಹಿಂದುಸ್ಥಾನ**ವನ್ನು ನುಗ್ಗಬೇಕೆಂದು ಹೊರಟನು.

**೩. ಸಿಕಂದರನು ಹಿಂದುಸ್ಥಾನದ ಮೇಲೆ ದಂಡೆತ್ತಿ ಬಂದದ್ದು**:— ಸಿಕಂದರನು ಕ್ರಿ. ಶ. ಪೂ. ೩೨೯ ರಲ್ಲಿ **ಕಾಬೂಲ**ದ ವರೆಗೆ ಬಂದು ತಿರುಗಿ ಹೋದನು. ಮುಂದೆ ೨ ವರ್ಷಗಳ ತರುವಾಯ ಎಂದರೆ ಕ್ರಿ. ಶ. ಪೂ. ೩೨೭ನೆಯ ವರ್ಷ ಕುದುರೆಯ ರಾವುತರಿಂದ ಕೂಡಿದ ಸುಮಾರು ೩೦ ಸಾವಿರ ಸೈನ್ಯದೊಡನೆ ಹಿಂದುಸ್ಥಾನದ ವಾಯವ್ಯ ಸರಹದ್ದಿಗೆ ಬಂದನು. ಚಳಿಗಾಲವು ಹೋಗಿ ಬೇಸಿಗೆ ಬರಲು **ಓಹಿಂದದ** ಹತ್ತರ ಸಿಂದೂ ನದವನ್ನು ದಾಟಿ * **ತಕ್ಷಶಿಲೆ**ಯ ರಾಜ್ಯವನ್ನು ಸೇರಿದನು. ಪಂಜಾಬದ ಸಣ್ಣ ದೊಡ್ಡ ರಾಜರು ಒಬ್ಬರೊಬ್ಬರ ವೈರಿಗಳಾಗಿದ್ದರು ತಕ್ಷಶಿಲೆಯ **ಅಂಭಿ** ಎಂಬ ರಾಜನು ಅಲೆಕ್‌ಝಾಂಡರನನ್ನು ಕೂಡಿಕೊಂಡು **ಪೋರವ**ನೊಡನೆ

* ತಕ್ಷಶಿಲೆ ಅಥವಾ ತಕ್ಷಿಲೆ ಎಂಬುದು ಆ ಕಾಲದ ಸುಪ್ರಸಿದ್ಧವಾದ ವಿಶ್ವವಿದ್ಯಾಲಯವಾಗಿದ್ದಿತು. ಇದು ರಾವಳಪಿಂಡಿಯ ವಾಯವ್ಯಕ್ಕೆ ೧೦ ಮೈಲಿನ ಮೇಲೆ ಇದೆ. ಸಂಶೋಧಕರು ನೆಲದಲ್ಲಿ ಹೂಳಿಹೋಗಿದ್ದ ಈ ಪಟ್ಟಣದ ಅವಶೇಷಗಳನ್ನು ಗೊತ್ತು ಹಚ್ಚುತ್ತಿರುವರು.

ಯುದ್ಧಮಾಡಲಿಕ್ಕೆ ಐದು ಸಾವಿರ ರಾಹುತರ ಬೆಂಬಲವನ್ನಿತ್ತನು. ಪೋರ ವನು ಧೈರ್ಯದಿಂದ ಯುದ್ಧಕ್ಕೆ ಸಿದ್ಧನಾದನು. ಜೇಹಲಂ ನದಿಯ ತೀರ ದಲ್ಲಿ ಘೋರವಾದ ಯುದ್ಧವಾಯಿತು. ಪೋರವನು ಸೋತು ಕೈಸೆರೆಯಾ ದನು. ಅಲೆಕ್‌ಝಾಂಡರನು ಪೋರವ (**ಪೌರಸ**) ನ ಧೈರ್ಯ-ಶೌರ್ಯ ಗಳಿಗೆ ಮೆಚ್ಚಿ ಅವನ ಇಚ್ಛೆಯ ಪ್ರಕಾರ ರಾಜ್ಯವನ್ನು ತಿರುಗಿ ಕೊಟ್ಟನು. ಪರಚಕ್ರಗಳು ಬಂದಾಗ ಒಕ್ಕಟ್ಟಿನಿಂದ ಎದುರಿಸುವದನ್ನು ಬಿಟ್ಟು ಅಂಭಿಯು ಅವನಿಗೆ ಸಹಾಯ ಮಾಡಿದನು. ವೇದವಿದ್ಯೆಯ ಆಗರವೆನಿಸಿದ ತಕ್ಷ ಶಿಲೆಯ ಕಣ್ಣಿಗೂ, ಈ ಕೃತಿಯಿಂದ ರಾಷ್ಟ್ರಕ್ಕೆ ಅಪಾಯವಾದೀತೆಂಬ ವಿಚಾ ರವು ಕಾಣದೆ ಹೋಯಿತು ! ತಕ್ಷಶಿಲೆಯ ಅಂಬಿಯು ಮಾಡಿದ ತಪ್ಪನ್ನೇ **ಮಹಮ್ಮದ** ಬಿನ್ **ಕಾಶೀಮ, ಘೋರೀ ಮಹಮ್ಮದ** ಮುಂತಾದವರು ದಂಡೆತ್ತಿಬಂದಾಗ ಹಿಂದುಗಳು ಮಾಡಿರುವರು.

೪. **ಸಿಕಂದರನು ಹಿಂದಿರುಗಿ ಹೋದದ್ದು** :— ಬಳಿಕ ಸಿಕಂದರನು ಪೂರ್ವಕ್ಕೆ ಸಾಗುತ್ತ ಸತಲಜ ನದಿಯವರೆಗೆ ಹೋದನು. ಇಡೀ ಹಿಂದು ಸ್ಥಾನವನ್ನು ಅಧೀನ ಪಡಿಸಿಕೊಳ್ಳುವ ಮನಸ್ಸು ಅವನದಿತ್ತು. ಮಗಧ ರಾಜ್ಯವು ಆಗ ಒಳ್ಳೆಯ ಬಲಾಢ್ಯವಾಗಿತ್ತು. ಸಿಕಂದರನ ಸೈನಿಕರು ಮುಂದೆ ಸಾಗಲು ಒಪ್ಪಲಿಲ್ಲ. ಅವರು ತಮ್ಮ ದೇಶಕ್ಕೆ ಹೋಗುವ ಆತುರವುಳ್ಳವ ರಾಗಿದ್ದರು. ಆದದರಿಂದ ಸಿಕಂದರನು ತನ್ನ ಇಚ್ಛೆಯನ್ನು ಒತ್ತಿಕ್ಕಿ ತಿರುಗಿ ಹೊರಟು ಹೋಗಬೇಕಾಯಿತು. ಬಂದ ದಾರಿಯಿಂದ ತಿರುಗಿ ಹೋಗದೆ ಅವನು ಜೆಹಲಂ, ಸಿಂಧುಗಳ ಜಲಮಾರ್ಗವಾಗಿ ಮುಖದ ವರೆಗೆ ಹೋಗಿ ಮುಂದೆ ಸಮುದ್ರದ ದಂಡೆಗುಂಟ ಇರಾಣದ ಆಖಾತಕ್ಕೆ ತಲುಪಿದನು. ಮತ್ತು ತನ್ನ ದೇಶಕ್ಕೆ ಮುಟ್ಟುವ ಪೂರ್ವದಲ್ಲಿಯೇ ಕ್ರಿ. ಶ. ಪೂ. ೩೨೫ ನೆಯ ವರ್ಷ, ಮುವತ್ತೆರಡು ವರ್ಷದವನಿರುವಾಗ **ಬಾಬಲಿನ** ಪಟ್ಟಣದಲ್ಲಿ ಮರಣಹೊಂದಿದನು.

೫. **ಸಿಕಂದರನ ದಾಳಿಯ ಪರಿಣಾಮ** :— ಈ ದಾಳಿಯ ನಂತರ ಹಿಂದುಸ್ಥಾನ-ಯುರೋಪಗಳ ಬಳಕೆಯು ಹೆಚ್ಚಿತು ಸಿಕಂದರನ ಸಂಗಡ ಗ್ರೀಸದ ಬಹುಜನ ವಿದ್ವಾಂಸರು ಇತ್ತ ಬಂದಿದ್ದರು. ಅವರು ಆಗಿನ

ಹಿಂದುಸ್ಥಾನದ ಸ್ಥಿತಿಯನ್ನು ವರ್ಣಿಸಿರುವರು. ಸಿಕಂದರನು ತನ್ನೊಡನೆ ಈ ದೇಶದ ಎಷ್ಟೋ ಪಂಡಿತರನ್ನೂ ಅನೇಕ ಗ್ರಂಥಗಳನ್ನೂ ಒಯ್ದಿದ್ದನು. ಇದರಿಂದ ಹಿಂದುಸ್ಥಾನದ ಸಂಪತ್ತು, ವಿದ್ಯೆ, ಕಲೆ, ಆಚಾರ, ವಿಚಾರ ಇವುಗಳ ಜ್ಞಾನವು ಯುರೋಪದವರಿಗಾಯಿತು.

**೬. ಅತಿ ಪ್ರಾಚೀನ ಕಾಲದ ಕಡೆ**:— ಕ್ರಿ. ಶ. ಪೂ. ೩೨೭ ರ ತರುವಾಯ ಹಿಂದುಸ್ಥಾನದೊಡನೆ ವಿದೇಶಗಳ ಸಂಬಂಧವು ಹೆಚ್ಚುತ್ತ ನಡೆದದರಿಂದ, ಈ ದೇಶದ ಇತಿಹಾಸದೊಳಗಿನ ಅನಿಶ್ಚಿತ ವಿಷಯಗಳನ್ನು ಸಮಕಾಲೀನವಾದ, ವಿದೇಶಗಳ ಇತಿಹಾಸಕ್ಕೆ ಒರೆಗಾಣಿಸಿಕೊಳ್ಳಲು ಅನುಕೂಲವಾಗಿರುವದು. ಈ ಪ್ರಕಾರದ ಅನುಕೂಲತೆಯು ಅತಿ ಪ್ರಾಚೀನ ಕಾಲದ ಇತಿಹಾಸಕ್ಕೆ ಇರುವದಿಲ್ಲ. ಇದೇ ಕಾರಣದಿಂದ, ವೇದಕಾಲದಿಂದ ಕ್ರಿ ಶ. ಪೂ. ೩೨೭ರ ವರೆಗಿನ ಇತಿಹಾಸವನ್ನು ಪ್ರಾಚೀನ ಕಾಲದ ಇತಿಹಾಸದಿಂದ ಬೇರ್ಪಡಿಸಿ, ಅದನ್ನು **ಅತಿ ಪ್ರಾಚೀನಕಾಲ**ವೆಂಬ ಸ್ವತಂತ್ರ ವಿಭಾಗದಲ್ಲಿ ವಿವರಿಸಿರುತ್ತದೆ. ಇಲ್ಲಿಗೆ ಅತಿ ಪ್ರಾಚೀನಕಾಲವು ಮುಗಿಯಿತು. ಮುಂದಿನ ವಿಭಾಗದಲ್ಲಿ ಸಿಕಂದರನ ದಾಳಿಯ ತರುವಾಯದ ಇತಿಹಾಸವು ಆರಂಭವಾಗುವದು.



# ಅತಿ ಪ್ರಾಚೀನ ಕಾಲದಲ್ಲಿ ವರ್ತಿಸಿದ
## ಕೆಲವು ಸಂಗತಿಗಳ ಕಾಲಗಳು.

**ಶೈಶುನಾಂಗ ವಂಶ**—(ಕ್ರಿ. ಶ. ಪೂ. **೬೪೨**. ಕ್ರಿ. ಶ. ಪೂ ೪೧೩).

| | | | | | |
|---|---|---|---|---|---|
| ೧. | ಬಿಂಬಿಸಾರ | ಕ್ರಿ. ಶ. ಪೂ. | ೬೪೨ | ಕ್ರಿ. ಶ. ಪೂ. | ೪೧೩ |
| ೨. | ಅಜಾತಶತ್ರು | ,, | ೫೮೨ | ,, | ೫೫೪ |
| ೩. | ದರ್ಶಕ | ,, | ೫೫೪ | ,, | ೫೨೭ |
| ೪. | ಉದಯ | ,, | ೫೨೭ | ,, | ೫೦೩ |
| | ಉಳಿದ ಅರಸರು | ,, | ೫೦೩ | ,, | ೪೧೩ |



| | | | |
|---|---|---|---|
| **ಕ್ರಿ. ಶ. ಪೂ.** | ೩೦೦೧ | | ಮಹಾಭಾರತ ಯುದ್ಧ |
| ,, | ೨೦೦೦ | **ಕ್ರಿ. ಶ. ಪೂ.** ೧೫೦೦ | ಆರ್ಯರ ಪ್ರಗತಿ |
| ,, | ೧೫೦೦ | ,, ೧೦೦೦ | ಉಪನಿಷತ್ಕಾಲ |
| ,, | ೮೦೦ | ,, ೭೦೦ | ಪಾಣಿನಿಯ ಕಾಲ |
| ,, | ೬೫೦ | | ನಾಣ್ಯಗಳ ಪ್ರಚಾರ |
| ,, | ೫೬೭ | ,, ೪೮೭ | ಗೌತಮ ಬುದ್ಧ |
| ,, | ೫೪೭ | ,, ೪೬೭ | ಮಹಾವೀರ ವರ್ಧಮಾನ |
| ,, | ೪೦೦ | | ಕಣಾದನ ಕಾಲ |
| ,, | ೩೨೭ | ,, ೩೨೫ | ಸಿಕಂದರನ ದಾಳಿ |



### ಅತಿ ಪ್ರಾಚೀನಕಾಲದ ಇತಿಹಾಸದ ಆವರ್ತನೆಯು ಹಾಗೂ
## ಪರೀಕ್ಷೆಯ ಪ್ರಶ್ನೆಗಳು.

೧. ಹಿಂದುಸ್ಥಾನದ ವೈಭವಕ್ಕೆ ಇದರ ಪ್ರಾಕೃತಿಕ ಸ್ವರೂಪವು ಹೇಗೆ ಕಾರಣವಾಯಿತು?

೨. ಆರ್ಯರ ಮೂಲ ಸ್ಥಾನವು ಯಾವದು? ಅವರು ಹಿಂದುಸ್ಥಾನಕ್ಕೆ ಯಾವ ಮಾರ್ಗವಾಗಿ ಬಂದರು?

೩. ಮೂಲ ನಿವಾಸಿಗಳು, ದ್ರವಿಡರು, ಪಂಜಾಬದ ಆರ್ಯರು ಇವರ ವಿಷಯವಾಗಿ ಗೊತ್ತಿದ್ದುದನ್ನು ಸಂಕ್ಷೇಪವಾಗಿ ಬರೆಯಿರಿ.

೪. ದ್ರವಿಡರ ಮೂಲಸ್ಥಾನ, ಅವರ ಪ್ರಗತಿ, ಅವರ ಭಾಷೆಯ ಈಗಿನ ಸ್ವರೂಪ ಇವುಗಳ ಸಂಬಂಧವಾಗಿ ಟಿಪ್ಪಣಿಗಳನ್ನು ಕೊಡಿರಿ.

೫. ಆರ್ಯಸಂಸ್ಕೃತಿಯ ಮಹತ್ವವವನ್ನೂ, ಗಂಗಾತೀರದ ಆರ್ಯರ ಪ್ರಗತಿಯನ್ನೂ ವಿವರಿಸಿರಿ.

೬. ಆರ್ಯರ ವರ್ಣವ್ಯವಸ್ಥೆಯು ಹೇಗೆ ಉದಯ ಹೊಂದಿತು? ಅವರ ವ್ಯವಸ್ಥೆಯು ಹೇಗಿದ್ದಿತು?

೭. ವೇದಗಳು, ಬ್ರಾಹ್ಮಣಗಳು, ಉಪನಿಷತ್ತುಗಳು, ಸೂತ್ರಗಳು, ಭಗವದ್ಗೀತೆ ಇವುಗಳ ವಿಷಯಕ್ಕೆ ಟಿಪ್ಪಣಿಗಳನ್ನು ಬರೆಯಿರಿ.

೮. ರಾಮಾಯಣ - ಮಹಾಭಾರತಗಳ ಕಥೆಗಳನ್ನು ಸಂಕ್ಷಿಪ್ತದಲ್ಲಿ ಹೇಳಿ ಅವುಗಳೊಳಗಿನ ಅನುಕರಣೀಯವಾದ ವ್ಯಕ್ತಿಗಳಲ್ಲಿ ಯಾವ ಯಾವ ಸದ್ಗುಣಗಳಿದ್ದವೆಂಬದನ್ನು ಹೇಳಿರಿ.

೯. ಅತಿ ಪ್ರಾಚೀನಕಾಲದ ಭರತಖಂಡದ ರಾಜ್ಯಗಳು ಯಾವವು? ಅವು ಈಗಿನ ಯಾವ ಯಾವ ಪ್ರಾಂತಗಳಲ್ಲಿದ್ದವು?

೧೦. ಬೌದ್ಧಧರ್ಮದ ಉದಯವಾಗಲು ಕಾರಣಗಳಾವವು? ಆ ಧರ್ಮವು ಹಿಂದುಸ್ಥಾನದಲ್ಲ ಏಕೆ ಬೇರೂರಿ ನಿಲ್ಲಲಿಲ್ಲ?

೧೧. ಮಹಾತ್ಮ ಗೌತಮ ಬುದ್ಧ ಮತ್ತು ಮಹಾವೀರ ವರ್ಧಮಾನ ಇವರ ಚರಿತ್ರೆಗಳನ್ನು ಸ್ವಲ್ಪದರಲ್ಲಿ ಬರೆದು, ಅವರು ಸ್ಥಾಪಿಸಿದ ಮತತತ್ವಗಳ ಸಾಮ್ಯ-ವೈಷಮ್ಯಗಳನ್ನು ವಿವರಿಸಿರಿ.

೧೨. ಸಿಕಂದರನ ದಾಳಿಯ ವಿಷಯವಾಗಿ ಗೊತ್ತಿದ್ದುದನ್ನು ಬರೆಯಿರಿ. ಈ ದಾಳಿಯಲ್ಲಿ ಹಿಂದುಗಳಿಗೆ ಅಪಜಯವಾಗಲು ಕಾರಣವೇನು? ಈ ದಾಳಿಯಿಂದ ಈ ದೇಶದ ಮೇಲೆ ಪರಿಣಾಮವೇನಾಯಿತು?

---

# ಎರಡನೆಯ ಭಾಗ

**ಪ್ರಾಚೀನಕಾಲ.** (ಕ್ರಿ. ಶ. ಪೂ. ೩೨೦ ರಿಂದ ಕ್ರಿ. ಶ. ೧೨೦೫ ರ ವರೆಗೆ).

## ೧ ನೆಯ ಪಾಠ.

### ಮೌರ್ಯ ಸಾಮ್ರಾಜ್ಯ

(ಕ್ರಿ. ಶ. ಪೂ ೩೨೧ ರಿಂದ ಕ್ರಿ. ಶ. ಪೂ. ೧೮೪)



೧. **ಚಂದ್ರಗುಪ್ತ**:— (ಕ್ರಿ. ಶ. ಪೂ. ೩೨೧. ಕ್ರಿ. ಶ. ಪೂ. ೨೯೮) ಇವನು ಕ್ರಿ ಶ ಪೂ. ೩೨೧ನೆಯ ವರ್ಷ ನಂದವಂಶವನ್ನು ಹಾಳುಮಾಡಿ ಮಗಧರಾಜ್ಯದ ಒಡೆಯನಾದನು. ಈ ರಾಜ್ಯವನ್ನು ದೊರಕಿಸುವ ಕಾರ್ಯದಲ್ಲಿ ಇವನಿಗೆ **ವಿಷ್ಣುಗುಪ್ತ** ಅಥವಾ **ಆರ್ಯಚಾಣಕ್ಯ**ನೆಂಬ ಬುದ್ಧಿಶಾಲಿಯಾದ ಬ್ರಾಹ್ಮಣನ ಸಹಾಯವು ದೊರೆಯಿತು ಈ ಆರ್ಯಚಾಣಕ್ಯನು ನಂದರ ಮಂತ್ರಿಯಾಗಿದ್ದನು. ಇವನು ಬರೆದ ಕೌಟಿಲೀಯ ಅರ್ಥಶಾಸ್ತ್ರವೆಂಬ ಗ್ರಂಥದಲ್ಲಿ ರಾಜನೀತಿ ಶಾಸ್ತ್ರವು ಮಾರ್ಮಿಕವಾಗಿ ವಿವೇಚಿಸಲ್ಪಟ್ಟಿರುವದು. ಈತನು ಆರ್ಯ ಧರ್ಮದ ಅಭಿಮಾನಿಯಾಗಿದ್ದನು. **ನಂದ** ಅರಸರು ಬೌದ್ಧ ಧರ್ಮಕ್ಕೆ ಅನುಕೂಲರಾಗಿದ್ದರು. ಒಂದು ದಿನ ತುಂಬಿದ ಸಭೆಯಲ್ಲಿ ನಂದರಿಂದ ಚಾಣಕ್ಯನ ಅಪಮಾನವಾಯಿತು. ಆಗ ಚಾಣಕ್ಯನು "ನಾನು ನಂದರನ್ನು ನಾಶ ಮಾಡದಿದ್ದರೆ ಚಾಣಕ್ಯನೇ ಅಲ್ಲ" ಎಂದು ಪ್ರತಿಜ್ಞೆ ಮಾಡಿದನು. ನಂದರ ಸೇನಾಪತಿಯಾದ ಚಂದ್ರಗುಪ್ತನಿಗೂ ನಂದರನ್ನು ನಾಶಗೊಳಿಸುವದೇ ಬೇಕಿದ್ದಿತು ಚಾಣಕ್ಯ-ಚಂದ್ರಗುಪ್ತರು ನಂದರ ನಾಶಕ್ಕಾಗಿ ಮಾಡಿದ ಒಂದು ಪ್ರಯತ್ನವು ಸಫಲವಾಗದಿರಲು ಇಬ್ಬರೂ ನಂದರಾಜ್ಯದಿಂದ ಹೊರಗೆ ಹಾಕಲ್ಪಟ್ಟರು. ಅವರು ಹತಾಶರಾಗದೆ ಪಂಜಾಬದಲ್ಲಿ ನಿಂತುಕೊಂಡು ನಂದರಾಜರ ನಾಶದ ಉಪಾಯವನ್ನು ಯೋಚಿಸುತ್ತಿದ್ದರು. ಸಿಕಂದರನ ಮರಣದ ನಂತರ ಪಂಜಾಬದ ಪೋರವ ಮೊದಲಾದ ಅರಸರ ಸಹಾಯವನ್ನು ಪಡೆದು, ನಂದರ ರಾಜ್ಯವನ್ನು ನುಗ್ಗಿ, **ಧನಾನಂದ**ನನ್ನು ಸೋಲಿಸಿ ಕೊಂದು ಮಗಧ ರಾಜ್ಯವನ್ನು

ಆಕ್ರಮಿಸಿದರು ಚಾಣಕ್ಯನು ಚಂದ್ರಗುಪ್ತನ ಮಂತ್ರಿಯಾದನು. ಚಂದ್ರಗುಪ್ತ ಚಾಣಕ್ಯರ ಶೌರ್ಯ, ಸಾಹಸ, ಬುದ್ಧಿಶಕ್ತಿ ಇವುಗಳ ಸಂಯೋಗದಿಂದ ಪ್ರಾಚೀನ ಇತಿಹಾಸ ಕಾಲದ ಮೊದಲನೆಯ ಸಾಮ್ರಾಜ್ಯವು ಸ್ಥಾಪಿತವಾಯಿತು. ಮುಂದೆ ಮಧ್ಯಕಾಲದಲ್ಲಿ **ಹರಿಹರ–ವಿದ್ಯಾರಣ್ಯರು** ಸ್ಥಾಪಿಸಿದ ವಿಜಯನಗರದ ಸಾಮ್ರಾಜ್ಯವು ಎರಡನೆಯದು. ಮತ್ತು ಅರ್ವಾಚೀನ ಕಾಲದಲ್ಲಿ **ಶಿವಾಜಿ–ರಾಮದಾಸರು** ಸ್ಥಾಪಿಸಿದ ಸಾಮ್ರಾಜ್ಯವು ಮೂರನೆಯದು ಈ ಮೂರು ಸಾಮ್ರಾಜ್ಯಗಳ ಸ್ಥಾಪನೆಯಲ್ಲಿ ಶೌರ್ಯ, ಧೈರ್ಯ, ಸಾಹಸ, ಬುದ್ಧಿಚಾತುರ್ಯ, ವಿದ್ಯೆ, ನೀತಿ ಇವುಗಳ ಮನೋಹರವಾದ ಸಂಗಮವಾದದ್ದು ಕಂಡು ಬರುವದು.

೨. **ಚಂದ್ರಗುಪ್ತನ ರಾಜ್ಯವಿಸ್ತಾರ**:— ಚಂದ್ರಗುಪ್ತನು ಪಟ್ಟಕ್ಕೆ ಬಂದ ಬಳಿಕ ಭರದಿಂದ ರಾಜ್ಯವನ್ನು ವಿಸ್ತರಿಸಿದನು. ಸಿಕಂದರನ ಒಡೆತನಕ್ಕೆ ಸೇರಿದ್ದ ಪಂಜಾಬ ಪ್ರಾಂತವನ್ನು ಇವನು ತನ್ನ ಅಧಿಕಾರಕ್ಕೊಳಪಡಿಸಿಕೊಂಡನು. ಸಿಂಧುನದದಿಂದ ಬಂಗಾಲದ ವರೆಗಿನ ಎಲ್ಲ ರಾಜ್ಯವು ಇವನ ವಶಕ್ಕೆ ಬಂದಿತು. ಇಷ್ಟರಲ್ಲಿ ಸಿಕಂದರನ ಶೂರ ಸೇನಾಪತಿಯಾದ **ಸೆಲ್ಯೂಕಸ**ನು ಸಿಂಧದ ಆಚೆಯ ಪ್ರದೇಶಗಳ ಮೇಲೆ ತನ್ನ ಒಡೆತನವನ್ನು ನೆಲೆಸಿ ಹಿಂದು ಸ್ಥಾನದ ಮೇಲೆ ನಾಗಿಬಂದನು. ಆಗ ಸೆಲ್ಯೂಕಸನಿಗೂ ಚಂದ್ರಗುಪ್ತನಿಗೂ ಯುದ್ಧವಾಗಿ ಸೆಲ್ಯೂಕಸನು ಸೋತನು. **ಕಾಬುಲ, ಕಂದಾಹಾರ, ಬಲುಚಿಸ್ಥಾನ** ಈ ಪ್ರಾಂತಗಳು ಸೆಲ್ಯೂಕಸನಿಂದ ಚಂದ್ರಗುಪ್ತನಿಗೆ ದೊರೆತವು. ಮತ್ತು ಸೆಲ್ಯೂಕಸನು ತನ್ನ ಮಗಳನ್ನು ಚಂದ್ರಗುಪ್ತನಿಗೆ ಕೊಟ್ಟು ಆತನ ಸ್ನೇಹವನ್ನು ಸಂಪಾದಿಸಿದನು. ಅಂದಿನಿಂದ ಸೆಲ್ಯೂಕಸನ ವಕೀಲನಾದ **ಮೇಗ್ಯಾಸ್ಥಿನೀಸನು** ಚಂದ್ರಗುಪ್ತನ ಓಲಗದಲ್ಲಿರಹತ್ತಿದನು. ಚಂದ್ರಗುಪ್ತನು ಐದುನೂರು ಆನೆಗಳನ್ನು ಸೆಲ್ಯೂಕಸನಿಗೆ ಕೊಟ್ಟನು.

೩. **ಚಂದ್ರಗುಪ್ತನ ರಾಜ್ಯವ್ಯವಸ್ಥೆ**:— ಚಂದ್ರಗುಪ್ತನ ರಾಜ್ಯ ಪದ್ಧತಿಯು ಈಗಿನ ಕಾಲದ ಸುಧಾರಿಸಿದ ರಾಷ್ಟ್ರಗಳ ರಾಜ್ಯಪದ್ಧತಿಯನ್ನೇ ಹೋಲುವಂತಹದಿದ್ದಿತು. ಇದರಿಂದ ಚಂದ್ರಗುಪ್ತನ ಮತ್ತು ಆತನ ಗುರುವೂ ಮಂತ್ರಿಯೂ ಆದ ಆರ್ಯ ಚಾಣಕ್ಯನ ಯೋಗ್ಯತೆಯು ಚೆನ್ನಾಗಿ

ವ್ಯಕ್ತವಾಗುತ್ತದೆ. ರಾಜ್ಯದ ಮುಖ್ಯ ಭಾಗದ ವ್ಯವಸ್ಥೆಯನ್ನು ಅರಸನು ಸ್ಥಾನಿಕ ಅಧಿಕಾರಿಗಳ ನೆರವಿನಿಂದ ತಾನೇ ನೋಡುವನು. ಅಧೀನ ಪ್ರದೇಶಗಳಿಗೆ ರಾಜಮನೆತನಕ್ಕೆ ಹೊಂದಿದವರನ್ನು ಪ್ರತಿನಿಧಿಗಳನ್ನಾಗಿ ನಿಯಮಿಸಿ ಅಲ್ಲಿಯ ಕಾರಭಾರವನ್ನು ಸಾಗಿಸುವನು. ರಾಜ್ಯಕಾರಭಾರದ ಸೌಲಭ್ಯಕ್ಕಾಗಿ ಆರು ಖಾತೆಗಳನ್ನು ಏರ್ಪಡಿಸಿದ್ದನು. ಅವುಗಳ ವಿವರ:— (ಅ) **ಸೈನ್ಯ** (ಆ) **ಗುಪ್ತಚಾರರು** (ಇ) **ನ್ಯಾಯವಿಚಾರಣೆ** (ಈ) **ಉತ್ಪನ್ನ** (ಉ) **ಕೆರೆ-ಕಾಲುವೆಗಳು** (ಊ) **ಲೋಕೋಪಯೋಗದ ಕೆಲಸಗಳು.**

ಅ) **ಸೈನ್ಯ**:— ಇವನ ಸೈನ್ಯವು ಆನೆ, ಕುದುರೆ, ರಥ, ಕಾಲಾಳು ಇವುಗಳಿಂದ ಕೂಡಿದ್ದಿತು. ಈ ನಾಲ್ಕು ತರದ ಸೈನ್ಯದ ಮೇಲೆ ನಾಲ್ವರು ಮುಖ್ಯ ಅಧಿಕಾರಿಗಳಿದ್ದರು. ಯುದ್ಧದ ಹಡಗುಪಡೆಯ ಮೇಲೊಬ್ಬ ಸ್ವತಂತ್ರ ಅಧಿಕಾರಿಯು ಇದ್ದನು. ಸೈನ್ಯದ ಪ್ರವಾಸದ ವ್ಯವಸ್ಥೆಯನ್ನು ಒಬ್ಬ ಸ್ವತಂತ್ರ ಅಧಿಕಾರಿಯು ಮಾಡುತ್ತಿದ್ದನು. ಈ ಪ್ರಕಾರ ಸೈನ್ಯವು ಆರು ಜನ ಅಧಿಕಾರಿಗಳ ಮೇಲ್ವಿಚಾರಕ್ಕೆ ಒಳಪಟ್ಟಿತ್ತು. ಆರು ಲಕ್ಷ ಕಾಲಾಳು, ಮೂವತ್ತು ಸಾವಿರ ಸವಾರರು, ಒಂಭತ್ತು ಸಾವಿರ ಆನೆಗಳು, ಎಂಟು ಸಾವಿರ ರಥಗಳು ಚಂದ್ರಗುಪ್ತನ ಸೈನ್ಯದಲ್ಲಿದ್ದವು.

ಕತ್ತಿ-ಢಾಲು, ಬಿಲ್ಲು-ಬಾಣ ಇವೇ ಆ ಕಾಲದ ಯೋಧರ ಆಯುಧಗಳಾಗಿದ್ದವು. ತೀಕ್ಷ್ಣವಾದ ಬಾಣಗಳ ಹೊಡೆತಕ್ಕೆ ಢಾಲು, ಮೈಜೋಡುಗಳು ಈಡಾಗುತ್ತಿದ್ದಿಲ್ಲ. ಬಿಲ್ಲುಗಳು ಆಳ ಎತ್ತರದವೂ ಬಾಣಗಳು ಆರು ಮೊಳದವೂ ಇದ್ದವು. ಬಿಲ್ಲಿನ ಒಂದು ತುದಿಯನ್ನು ನೆಲಕ್ಕೂರಿ ಹೆದೆಯನ್ನು ಕಿವಿವರೆಗೆ ಉಗಿದು ಬಿಟ್ಟ ಬಾಣಗಳು ಶತ್ರುಗಳನ್ನು ಚದುರಿಸಿಬಿಡುವವು.

(ಆ) **ಗುಪ್ತ ಚಾರರು** — ಎಲ್ಲಿ ಕಡೆಯಲ್ಲ ನಡೆದ ಮಹತ್ವದ ಸಂಗತಿಗಳ ವರ್ತಮಾನವನ್ನೂ ಶತ್ರುಗಳ ಒಳಸಂಚು-ಸುಳಿದಾಟಗಳನ್ನೂ ಅರಸನಿಗೆ ತಿಳಿಸುವದು ಗುಪ್ತಚಾರರ ಕೆಲಸವಾಗಿದ್ದಿತು.

(ಇ) **ನ್ಯಾಯವಿಚಾರಣೆ**:— ನ್ಯಾಯವಿಚಾರಣೆಯು ನಿಷ್ಪಕ್ಷಪಾತದಿಂದ ನಡೆಯುತ್ತಿದ್ದಿತು. ಅಪರಾಧಿಗಳಿಗೆ ಕಠಿಣ ತರದ ಶಿಕ್ಷೆಯು ವಿಧಿಸಲ್ಪ

ಡುತ್ತಿತ್ತು. ಕಡೆಯ ನ್ಯಾಯವಿಚಾರಣೆಯ ಅಧಿಕಾರವು ಅರಸನದಿದ್ದಿತು. ಅವನು ತುಂಬಿದ ಸಭೆಯಲ್ಲಿ ಕುಳಿತು ನ್ಯಾಯವಿಚಾರಣೆ ಮಾಡುತ್ತಿದ್ದನು.

(ಈ) **ಉತ್ಪನ್ನ**:— ಭೂಕಂದಾಯ, ಕಾಲುವೆ, ಮಾದಕದ್ರವ್ಯ, ವ್ಯಾಪಾರದ ಸರಕು ಇವುಗಳ ಮೇಲಿನ ಕರ ಇವು ರಾಜ್ಯದ ಉತ್ಪನ್ನದ ಮಾರ್ಗಗಳಾಗಿದ್ದವು. ಭೂಮಿಯ ಉತ್ಪನ್ನದ ನಾಲ್ಕನೆಯ ಪಾಲು ಸರಕಾರಕ್ಕೆ ಸಲ್ಲುತ್ತಿತ್ತು.

(ಉ) **ಕೆರೆಕಾಲುವೆಗಳು**.— ಹೊಸ ಕಾಲುವೆಗಳನ್ನು ಕಟ್ಟಿಸುವದು, ಇದ್ದವುಗಳನ್ನು ಕೆಡದಂತೆ ಕಾಯ್ದುಕೊಳ್ಳುವದು, ಕಾಲುವೆಯ ನೀರಿನ ಕರವನ್ನು ಗೊತ್ತುಮಾಡಿ ಅದನ್ನು ಎತ್ತುವದು ಇವು ಈ ಖಾತೆಯ ಕೆಲಸಗಳಾಗಿದ್ದವು.

(ಊ) **ಲೋಕೋಪಯೋಗದ ಕೆಲಸಗಳು**.— ಮಾರ್ಗಗಳನ್ನು ಕೆಡದಂತೆ ನೋಡಿಕೊಳ್ಳುವದು, ಹೊಸ ಮಾರ್ಗಗಳನ್ನು ಮಾಡಿಸುವದು, ಪ್ರಯಾಣಸ್ಥರ ತೊಂದರೆಗಳನ್ನು ದೂರಪಡಿಸುವದು ಇವೇ ಮೊದಲಾದ ಜನಹಿತದ ಕೆಲಸಗಳು ಈ ಖಾತೆಯವರಿಂದ ಜರುಗುತ್ತಿದ್ದವು.

೪. **ಚಂದ್ರಗುಪ್ತನ ಕಾಲದ ಲೋಕಸ್ಥಿತಿ**:— ಆ ಕಾಲದಲ್ಲಿ ಹಿಂದುಸ್ಥಾನದಲ್ಲಿ ಏಳು ಜಾತಿಗಳಿದ್ದವು. ಬ್ರಾಹ್ಮಣರು ವರ್ಚಸ್ಸುಳ್ಳವರಾಗಿದ್ದರು. ಸ್ತ್ರೀಯರ ಪಾತಿವ್ರತ್ಯವೂ ಪುರುಷರ ಧೈರ್ಯ-ಶೌರ್ಯಗಳೂ ಹೊಗಳತಕ್ಕವಾಗಿದ್ದವು. ಕಳ್ಳ-ಸುಳ್ಳರ ಸುಳಿವು ವಿಶೇಷವಾಗಿದ್ದಿಲ್ಲ. ಒಕ್ಕಲತನ-ಕೈಗಾರಿಕೆಗಳಲ್ಲಿ ಜನರು ಒಳ್ಳೆಯ ಕುಶಲರಿದ್ದರು. ಹಳ್ಳಿಯ ಇಲ್ಲವೆ ಪಟ್ಟಣಗಳ ಅಂತರ್ವ್ಯವಸ್ಥೆಯಲ್ಲಿ ಅರಸರು ಕೈಹಾಕುತ್ತಿರಲಿಲ್ಲ. ಇವು ತಮ್ಮಷ್ಟಕ್ಕೆ ಸ್ವತಂತ್ರವಾದ ಚಿಕ್ಕ ರಾಜ್ಯಗಳಾಗಿದ್ದವು. ಪಟ್ಟಣಗಳ ವ್ಯವಸ್ಥೆಯನ್ನು ನೋಡುವ **ಮಂಡಲವು** ಈಗಿನ **ಮ್ಯುನಿಸಿಪಾಲಿಟಿಯ** ಮಾದರಿಯದಿರಬಹುದೆಂದು ತೋರುವದು. ರಾಜರಾಜರಲ್ಲಿ ಯುದ್ಧಗಳು ನಡೆದಾಗ ಯುದ್ಧಕ್ಕೆ ಸಂಬಂಧವಿಲ್ಲದ ಜನರು ತಮ್ಮ ಉದ್ಯೋಗವ್ಯವಹಾರಗಳನ್ನು ನಿಶ್ಚಿಂತೆಯಿಂದ ನಡೆಯಿಸಬಹುದಾಗಿತ್ತು. ಕೊಲೆ-ಸುಲಿಗೆಗಳ ಗಾಳಿಯು ಅವರಿಗೆ ಸೋಂಕುತ್ತಿದ್ದಿಲ್ಲ. ಆಗಿನ ಯುದ್ಧನೀತಿಯೇ ಇದಕ್ಕೆ ಕಾರಣವು. ಅನೇಕ ಅರಸುಮನೆತನಗಳು ಅಳಿಹೋದರೂ ಗ್ರಾಮಸಂಸ್ಥೆಗಳು ಸ್ಥಿರವಾಗಿಯೇ ಉಳಿದುಕೊಂಡಿದ್ದವು. ಇಂಗ್ಲಿಷರ ಆಳಿಕೆ

ಯಿಂದೀಚಿಗೆ ಹೊಸ ಪದ್ಧತಿಯ ರಾಜ್ಯಕಾರಭಾರವು ನಡೆಯಹತ್ತಿದ್ದರಿಂದ ಪ್ರಾಚೀನ ಕಾಲದಿಂದ ಅಖಂಡವಾಗಿ ನಡೆಯುತ್ತ ಬಂದಿದ್ದ ಗ್ರಾಮಸಂಸ್ಥೆಗಳು ಇಲ್ಲದಂತಾದವು.

ಮೌರ್ಯರ ಕಾಲದ ಹಿಂದುಸ್ಥಾನ

ಚಂದ್ರಗುಪ್ತನ ರಾಜ್ಯದ ಮೇರೆ
ಅಶೋಕನ ರಾಜ್ಯದ ಮೇರೆ

ರಾಜಧಾನಿಯಾದ **ಪಾಟಲೀಪುತ್ರವು** ಒಳ್ಳೆಯ ಘನತೆಯನ್ನು ಪಡೆದಿದ್ದಿತು. ಅಲ್ಲಿಂದ ಎಲ್ಲ ಕಡೆಗೆ ರಾಜಮಾರ್ಗಗಳು ಆಗಿದ್ದವು. ಒಳದೇಶದ ವ್ಯಾಪಾರವು ಭರದಿಂದ ನಡೆಯುತ್ತಿದ್ದಿತು. ಜಲಮಾರ್ಗವಾಗಿ ದೂರದೂರದ ದೇಶಗಳ ಸಂಗಡ ಹಿಂದುಸ್ಥಾನದ ವ್ಯಾಪಾರವು ನಾಗುತ್ತಿತ್ತು. ವ್ಯಾಪಾರಸ್ಥರ ರಕ್ಷಣೆಗಾಗಿ ವಿಶೇಷವಾಗಿ ಲಕ್ಷ್ಯವು ಪೂರೈಸಲ್ಪಡುತ್ತಿತ್ತು.

ಮೌರ್ಯ ಮನೆತನದ ಸ್ಥಾಪಕನೂ ಪ್ರಾಚೀನ ಭರತಖಂಡದ ಸಾಮ್ರಾಜ್ಯದ ಸಂಸ್ಥಾಪಕನೂ ಮೊದಲನೆಯ ಚಕ್ರವರ್ತಿಯೂ ಪರಾಕ್ರಮಿಯೂ

ರಾಜಕಾರಣನಿಪುಣನೂ ಬುದ್ಧಿಶಾಲಿಯೂ ಆದ ಈ ಗುಪ್ತನು ಕ್ರಿ. ಶ. ಪೂ. ೨೯೮ನೆಯ ವರ್ಷ ಮರಣಹೊಂದಿದನು. ಇವನು ಸಾಯುವ ಪೂರ್ವದಲ್ಲಿ ಜೈನಧರ್ಮದ ದೀಕ್ಷೆಯನ್ನು ಹೊಂದಿ ಮೈಸೂರ ಪ್ರಾಂತಕ್ಕೆ ಬಂದನೆಂದು ತಿಳಿಯುತ್ತದೆ. ಇವನ ತರುವಾಯ ಇವನ ಮಗನಾದ **ಮಿತ್ರಗುಪ್ತ** ಅಥವಾ **ಬಿಂದುಸಾರನು** ಮಗಧ ಸಾಮ್ರಾಜ್ಯದ ಒಡೆಯನಾದನು.

೫. **ಬಿಂದುಸಾರ**:— ಈತನು ಸೆಲ್ಯುಕಸನ ನಂತರ ಬಂದ **ಅಂಟಿಯೋಕಸ್ಸ**ನೊಡನೆ ಸ್ನೇಹವನ್ನು ಬೆಳಸಿದನು ನರ್ಮದೆಯಿಂದ ತುಂಗಭದ್ರೆಯ ವರೆಗಿನ ದಕ್ಷಿಣ ದೇಶವನ್ನು ಗೆದ್ದು ಅಲ್ಲಿಯ ಅರಸರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡನು. ಇವನು ಇಪ್ಪತ್ತೈದು ವರುಷ ಸಾಮ್ರಾಜ್ಯ ವೈಭವವನ್ನು ಅನುಭವಿಸಿ, ಕ್ರಿ. ಶ ಪೂ. ೨೭೩ರಲ್ಲಿ ಮರಣ ಹೊಂದಿದನು. ಇವನ ಕಾಲದ ಇತಿಹಾಸವು ಹೆಚ್ಚಿಗೆ ಗೊತ್ತಾಗಿಲ್ಲ.

## ೨ನೆಯ ಪಾಠ.

### **ಮೌರ್ಯ ಸಾಮ್ರಾಜ್ಯ**. (ಮುಂದೆ ಸಾಗಿದ್ದು).



೧. **ಅಶೋಕನು ಚಕ್ರವರ್ತಿಯಾದನು**:— ಬಿಂದುಸಾರನ ಆಳಿಕೆಯಲ್ಲಿ ಇವನ ಎರಡನೆಯ ಮಗನಾದ **ಅಶೋಕನು** ವಾಯವ್ಯ ಪ್ರಾಂತದ ಪ್ರತಿನಿಧಿಯಾಗಿ ತಕ್ಷಶಿಲೆಯಲ್ಲಿ ಇರುತ್ತಿದ್ದನು ಆಗ ಆ ಪ್ರಾಂತದಲ್ಲಿ ಆದ ಬಂಡಾಯವನ್ನು ಈ ಅಶೋಕನು ತನ್ನ ಬುದ್ಧಿಚಾತುರ್ಯದಿಂದ ಸಹಜವಾಗಿ ಅಡಗಿಸಿದನು. ಅಲ್ಲಿಯ ಪ್ರಜೆಗಳ ನಂಬುಗೆಯನ್ನು ದೊರಕಿಸಿ ಸೌಮ್ಯ ಉಪಾಯಗಳಿಂದಲೇ ಅವರನ್ನು ದಾರಿಗೆ ತಂದನು. ಬಿಂದುಸಾರನ ಮರಣದ ನಂತರ ಅವನ ಹಿರಿಯ ಮಗನಾದ **ಸುಷೀಮನ**ನ್ನು ಬದಿಗೊತ್ತಿ, ಶೂರನಾದ ಅಶೋಕನು ಮಂತ್ರಿಯಾದ **ರಾಧಾಗುಪ್ತನ** ಸಹಾಯದಿಂದ ಸಿಂಹಾಸನವನ್ನೇರಿದನು. (ಕ್ರಿ. ಶ. ಪೂ. ೨೭೩).

೨. **ಅಶೋಕನ ಪರಾಕ್ರಮ:**—ಗೋದಾವರಿ-ಮಹಾನದಿಗಳ ಮುಖಗಳ ನೆರೆಯಲ್ಲಿಯ **ಕಲಿಂಗರ** ರಾಜ್ಯವು ಸ್ವತಂತ್ರವಾಗಿತ್ತು. ವ್ಯಾಪಾರದ ಮೂಲಕ ಅದು ಒಳ್ಳೆಯ ಘನತೆಯನ್ನು ಹೊಂದಿತ್ತು. ಅಲ್ಲಿಯ ವ್ಯಾಪಾರಿಗಳು ಜಲಪರ್ಯಟಣದಲ್ಲಿ ಬಹು ಕುಶಲರಿದ್ದರು. ಹಿಂದುಸ್ಥಾನದ ಪೂರ್ವಕ್ಕಿರುವ ನಡುಗಡ್ಡೆಗಳಲ್ಲಿ ಆರ್ಯಸಂಸ್ಕೃತಿಯನ್ನು ಹಬ್ಬುಗೊಳಿಸಿದವರು ಈ ಕಲಿಂಗರೇ. ಅಶೋಕನು ಮೂರು ನಾಲ್ಕು ವರ್ಷಗಳಲ್ಲಿ ಸುಮಾರು ಮುಂತಾದ ಒಳಹಗೆಗಳನ್ನು ಅಡಗಿಸಿ, ಕ್ರಿ. ಶ. ಪೂ. ೨೬೯ರಲ್ಲಿ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಬಳಿಕ ಕಲಿಂಗರ ಮೇಲೆ ದಂಡೆತ್ತಿ ಬಂದು ಅವರ ರಾಜ್ಯವನ್ನು ಗೆದ್ದುಕೊಂಡನು ಈ ದಾಳಿಯಲ್ಲಿ ಒಂದುವರೆ ಲಕ್ಷ ಜನರು ಸೆರೆಸಿಕ್ಕರು; ಒಂದು ಲಕ್ಷ ಜನರು ಮಡಿದರು, ಇದಕ್ಕಿಂತ ಹೆಚ್ಚು ಜನರು ದಾಳಿಯ ನಂತರ ಅನೇಕ ಕಾರಣಗಳಿಂದ ಸಾಪಿಗೆ ತುತ್ತಾದರು. ಈ ನಿರ್ದಯತನದ ಕೊಲೆಯಿಂದ ಕಲಿಂಗದೇಶವು ಹಾಳಾಗಿಹೋಯಿತು ಎಷ್ಟೋ ಸಾಧುಗಳೂ ಪಂಡಿತರೂ ಸಹ ಜೀವಕ್ಕೆರವಾದರು. ಈ ಅಮಾನುಷವಾದ ಹಿಂಸೆಯಿಂದ ಅಶೋಕನ ಮನಸ್ಸಿನಸ್ಥಿತಿಯು ಒಮ್ಮೆಲೆ ಬೇರೆಯಾಯಿತು. ತನ್ನ ಸಾಮ್ರಾಜ್ಯವಿಸ್ತಾರದ ಅತ್ಯಾಶೆಯೇ ಈ ಅನರ್ಥದ ಕಾರಣವೆಂದು ನೆನೆದು, ಆತನು ದೊರೆತ ವಿಜಯವನ್ನು ಪ್ರೀತಿಸದಾದನು ವೈಭವದ ವಿಷಯವಾಗಿ ಅವನಲ್ಲಿ ತಿರಸ್ಕಾರವುಂಟಾಯಿತು. ನಿಷ್ಕಾರಣವಾಗಿ ಇನ್ನೆಂದೂ ಯುದ್ಧಮಾಡಬಾರದೆಂದು ನಿಶ್ಚಯಿಸಿಕೊಂಡು ಕಡೆತನಕ ಅದರಂತೆಯೇ ವರ್ತಿಸಿದನು.

೩. **ಅಶೋಕನು ಬೌದ್ಧಧರ್ಮವನ್ನು ಸ್ವೀಕರಿಸಿದ್ದು:**— ಬೌದ್ಧಧರ್ಮದ ಅಹಿಂಸೆ, ಭೂತದಯೆ, ಪರೋಪಕಾರ ಮುಂತಾದ ನೀತಿತತ್ತ್ವಗಳ ಪರಿಣಾಮವು ಅಶೋಕನ ಮನಸ್ಸಿನ ಮೇಲೆ ದಿನದಿನಕ್ಕೆ ಹೆಚ್ಚಾಗಹತ್ತಿತು. ಅವನು ಮುಂದೆ ಬೌದ್ಧಧರ್ಮವನ್ನು ಅಂಗೀಕರಿಸಿದನು. ರಾಜ್ಯದಲ್ಲಿ ಬೇಟೆಯಾಡುವದನ್ನು ನಿಲ್ಲಿಸಿದನು **ಕಪಿಲವಸ್ತು, ಗಯೆ** ಮುಂತಾದ ಬೌದ್ಧಧರ್ಮದ ಪವಿತ್ರ ಸ್ಥಳಗಳ ಯಾತ್ರೆಯನ್ನು ಮಾಡಿದನು. ತಾನು ಮನಶ್ಶಾಂತಿಗಾಗಿ ಬೌದ್ಧಧರ್ಮವನ್ನು ಸ್ವೀಕರಿಸಿದರೂ ಉಳಿದ ಧರ್ಮದವರನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದನು. **ಭಿನ್ನ ಧರ್ಮದವರಾದರೂ ಎಲ್ಲರೂ ಒಕ್ಕಟ್ಟಿನಿಂದ ಇರಬೇಕು;** ಎಂಬುದು ಅವನ ಒಂದು ಲೇಖದ ಅಭಿಪ್ರಾಯವದೆ.

೪. **ಅಶೋಕನು ಮಾಡಿದ ಬೌದ್ಧಧರ್ಮದ ಪ್ರಸಾರ.**— ಅಶೋಕನು ಸ್ವತಂತ್ರವಾದ ಧರ್ಮಖಾತೆಯೊಂದನ್ನು ಏರ್ಪಡಿಸಿ, ಅರವತ್ತು ನಾಲ್ಕು ಸಾವಿರ ಧರ್ಮೋಪದೇಶಕರನ್ನು ನಿಯಮಿಸಿ, ಈ ದೇಶದಲ್ಲಿಯೂ ಪರದೇಶಗಳಲ್ಲಿಯೂ ಬೌದ್ಧಧರ್ಮವನ್ನು ಹಬ್ಬುಗೊಳಿಸಿದನು. ದೇಶದ ಯಾವತ್ತು ಭಾಗಗಳಲ್ಲಿ ಧರ್ಮಸಂಬಂಧವಾದ ಆಜ್ಞೆಗಳನ್ನು ಪ್ರಸಿದ್ಧಿಸಿ, ಅಲ್ಲಲ್ಲಿ ಬಂಡೆಗಳ ಮೇಲೂ ಕಲ್ಲುಗಳ ಮೇಲೂ ಅವನ್ನು ಕೊರೆಯಿಸಿದನು. ತನ್ನ ಮಗನಾದ **ಮಹಿಂದನನ್ನು** ಧರ್ಮಪ್ರಸಾರಕ್ಕಾಗಿ **ಸಿಂಹಲ** ದ್ವೀಪಕ್ಕೆ ಕಳುಹಿದನು. ಬೌದ್ಧ ಭಿಕ್ಷುಗಳಿಗೋಸುಗ ಪಾಟಲೀಪುತ್ರದ ನೆರೆಯಲ್ಲಿ ಎರಡು ಭವ್ಯವಾದ ಮಠಗಳನ್ನು ಕಟ್ಟಿಸಿದನು. ಆಜೀವಕರಗೋಸ್ಕರ ಗುಡ್ಡಗಳಲ್ಲಿ ಗವಿಗಳನ್ನು ಮಾಡಿಸಿದನು. ಇವನು ಬೌದ್ಧರ ಮೂರನೆಯ ಧರ್ಮಸಭೆಯನ್ನು ನೆರೆಯಿಸಿ ಧರ್ಮಸಂಬಂಧವಾದ ತೊಡಕಿನ ಪ್ರಶ್ನೆಗಳನ್ನು ಚರ್ಚಿಸಿದನು. ಈ ಸಭೆಯು ಒಂಬತ್ತು ತಿಂಗಳು ನಡೆಯಿತು. ಈ ಚರ್ಚೆಯಿಂದ ಗೊತ್ತಾದ ನಿರ್ಣಯಗಳನ್ನು ಸಂಗ್ರಹಿಸಿ ಒಂದು ಧರ್ಮಗ್ರಂಥವನ್ನು ಬರೆಯಿಸಿದನು.

೫. **ಅಶೋಕನು ಕಟ್ಟಿಸಿದ ಕಟ್ಟಡಗಳು.**— ಇವನ ಕಾಲದ ಕಟ್ಟಡಗಳೆಲ್ಲ ಧರ್ಮಬುದ್ಧಿಯಿಂದಲೂ ಲೋಕೋಪಯೋಗದ ದೃಷ್ಟಿಯಿಂದಲೂ ಕಟ್ಟಿಸಿದಂತಹವಾಗಿವೆ. ವಿಲಾಸ ಮತ್ತು ವೈಭವ ಇವುಗಳ ಅಪೇಕ್ಷೆಯಿಂದ ಯಾವ ಕಟ್ಟಡವನ್ನೂ ಕಟ್ಟಿಸಲಿಲ್ಲ. ಹದಿನಾಲ್ಕು ಧರ್ಮಾಜ್ಞೆಗಳನ್ನು ಕೊರೆಯಿಸಿದ **ಗಿರಿಲೇಖಗಳು** ದೇಶದ ಎಲ್ಲ ಭಾಗಗಳಲ್ಲಿ ದೊರೆತಿರುವವು. ಗುಡ್ಡ-ಬಂಡೆಗಳ ಅನುಕೂಲವಿಲ್ಲದಲ್ಲಿ ಈ ಲೇಖಗಳನ್ನು ಕೊರೆಯಿಸಿದ ಭವ್ಯವಾದ ಸ್ತಂಭಗಳನ್ನು ನಿಲ್ಲಿಸಿರುವನು. ಅಯೋಧ್ಯಾ ಪ್ರಾಂತದಲ್ಲಿರುವ ಇಂಥ ಒಂದು ಸ್ತಂಭವು, ಮೂವತ್ತು ಮೂವತ್ತೆರಡು ಮೊಳ ಎತ್ತರವಿದ್ದು ಅದರ ಮೇಲಿನ ಕೆತ್ತಿಕೆ-ಒಪ್ಪಗಳು ಹೊಗಳತಕ್ಕಂಥವುಗಳಾಗಿವೆ. ಈ ಸ್ತಂಭದ ತೂಕವು ಸುಮಾರು ನಾಲ್ಕು ಸಾವಿರ ಮಣ ಆಗಬಹುದೆಂದು ಹೇಳುವರು. ಇಂಥ ಅತಿ ಭಾರವಾದ ಕಲ್ಲುಗಳನ್ನು ಖನಿಯೊಳಗಿಂದ ತೆಗೆದು, ಇಷ್ಟು ಎತ್ತರದ ಮೇಲೆ ನಿಲುಕಿಸಿ, ಭದ್ರವಾಗಿರುವಂತೆ ಕಟ್ಟಿರುವದನ್ನು ನೋಡಿದರೆ, ಆ ಕಾಲದ ವಾಸ್ತುಶಾಸ್ತ್ರದ ಪ್ರಗತಿಯು ಶ್ರೇಷ್ಠ ತರಗತಿಯದಿತ್ತೆಂದು ಗೊತ್ತಾಗುವದು. ಈ ಸ್ತಂಭಗಳಲ್ಲದೆ ಅಶೋಕನು ಅಲ್ಲಲ್ಲಿ ಅನೇಕ

ಸ್ತೂಪಗಳನ್ನು ಕಟ್ಟಿಸಿದ್ದನು. ಇವುಗಳಲ್ಲಿ ಸಾಂಚಿಯ ಸ್ತೂಪವು ಬಹು ಪ್ರಸಿದ್ಧವಾದದ್ದು. ಮೂವತ್ತಾರು ಮೊಳ ಎತ್ತರವಾದ, ಡೊಬ್ಬು ಕೊಪ್ಪರಿಗೆಯ ಆಕಾರದ ಈ ಸ್ತೂಪವು ಒಂದು ವಿಸ್ತಾರವಾದ ಗಚ್ಚಿನ ನೆಲಗಟ್ಟಿನ



**ಅಶೋಕನ ಸ್ತಂಭ**

ಮೇಲೆ ಕಟ್ಟಲ್ಪಟ್ಟಿರುವದು. ಕಾಠೇವಾಡದ ಗಿರಿನಾರಪರ್ವತದ ನೆರೆಯಲ್ಲಿ ನದಿಯ ಪ್ರವಾಹವನ್ನು ಅಡ್ಡಗಟ್ಟಿ **ಸುದರ್ಶನ**ವೆಂಬ ದೊಡ್ಡ ಕೆರೆಯನ್ನು ಕಟ್ಟಿಸಿ, ನೀರಿಲ್ಲದ ಪ್ರದೇಶಗಳಿಗೆ ಕಾಲುವೆಗಳ ಮಾರ್ಗವಾಗಿ ನೀರು ದೊರೆಯು

ವಂತೆ ಮಾಡಿಸಿದ್ದನು. ಕಾಶ್ಮೀರ ನೇಪಾಳಗಳಲ್ಲಿಯ **ಶ್ರೀನಗರ** ಮತ್ತು **ದೇವಪಾಟಣ** ಎಂಬೆರಡು ಪಟ್ಟಣಗಳನ್ನು ಅಶೋಕನೇ ನೆಲೆಸಿದನು.

೬. **ಅಶೋಕನ ರಾಜ್ಯವ್ಯವಸ್ಥೆ** :— ಅಶೋಕನು ತನ್ನ ರಾಜ್ಯದಲ್ಲಿ ಐದು ವಿಭಾಗಗಳನ್ನು ಮಾಡಿ ಒಂದರ ವ್ಯವಸ್ಥೆಯನ್ನು ತನ್ನ ಕಡೆಗೆ ಇಟ್ಟುಕೊಂಡು, **ಉಜ್ಜಯಿನಿ, ತಕ್ಷಶಿಲೆ, ತೋಸಾಲಿ** (ಕಲಿಂಗ), **ಸುವರ್ಣನಗರ** (ಮೈಸೂರು) ಎಂಬ ನಾಲ್ಕು ಪ್ರಾಂತಗಳ ಮೇಲೆ ನಾಲ್ವರು ರಾಜಪ್ರತಿನಿಧಿಗಳನ್ನು ನಿಯಮಿಸಿದನು. ರಾಜನು ಸ್ವತಂತ್ರನೆಂಬಂತೆ ತೋರುತ್ತಿದ್ದರೂ ಅವನು ಪ್ರಜೆಗಳ ಮತವನ್ನು ಮೂಲೆಗೊತ್ತಿ ಮನಬಂದಂತೆ ನಡೆಯುವ ಹಾಗೆ ಇದ್ದಿಲ್ಲ ಪ್ರಜೆಗಳಲ್ಲಿಯ ಜಾಗ್ರತೆ ಮತ್ತು ಪ್ರಾಚೀನ ಪರಂಪರೆಯೇ ಇದರ ಕಾರಣವು. ಪ್ರಾಚೀನ ಕಾಲದಿಂದ ನಡೆಯುತ್ತ ಬಂದ ಧರ್ಮ, ಆಚಾರ-ವಿಚಾರ, ಸಾಂಪ್ರದಾಯ ಇವುಗಳಲ್ಲಿ ಹೆಚ್ಚುಕಡಿಮೆ ಮಾಡುವಾಗ ಧರ್ಮಾಧಿಕಾರಿಗಳ ಮತ್ತು ಧರ್ಮ ಸಭೆಗಳ ಒಪ್ಪಿಗೆಯನ್ನು ಪಡೆಯಲೇ ಬೇಕಾಗಿತ್ತು. ಸೈನ್ಯ ಮುಂತಾದ ಯಾವತ್ತು ಖಾತೆಗಳ ವ್ಯವಸ್ಥೆಯು ಚಂದ್ರಗುಪ್ತನ ಕಾಲದಂತೆಯೇ ನಡೆಯುತ್ತಿತ್ತು.

೭. **ಅಶೋಕನ ಪ್ರಜಾಹಿತದಕ್ಷತೆ**:— ಮಾರ್ಗದ ಎಡಬಲಗಳಲ್ಲಿ ಸಾಲು ಗಿಡಗಳನ್ನು ಹಚ್ಚಿಸಿ ದಾರಿಕಾರರ ಬಿಸಿಲಿನ ಬಾಧೆಯನ್ನು ತಪ್ಪಿಸಿದನು. ಅರ್ಧ ಹರದಾರಿಗೊಂದರಂತೆ ಬಾವಿಯನ್ನು ಕಟ್ಟಿಸಿ ನೀರಿನ ಕೊರತೆಯಾಗದಂತೆ ಮಾಡಿದನು. ಧರ್ಮಶಾಲೆಗಳನ್ನು ಕಟ್ಟಿಸಿದನು. ಮನುಷ್ಯರಿಗಾಗಿಯೂ ದನಗಳಿಗಾಗಿಯೂ ಅವಶ್ಯವಿದ್ದಲ್ಲಿ ಅರವಟ್ಟಿಗೆಗಳನ್ನಿಡಿಸಿದನು. ಮನುಷ್ಯರ ಮತ್ತು ದನಗಳ ಔಷಧಾಲಯಗಳನ್ನು ನಿರ್ಮಿಸಿದನು. ಔಷಧಗಳ ಕೊರತೆಯುಂಟಾಗಬಾರದೆಂದು ವನೌಷಧಿಗಳಿಂದ ಸಮೃದ್ಧವಾದ ತೋಟಗಳನ್ನು ಮಾಡಿಸಿದನು. ಇವೆಲ್ಲ ಸುಖಸಾಧನಗಳನ್ನು ಮಾಡಿಸುವದರಲ್ಲಿ, ಜನರು ಧರ್ಮನಿರತರಾಗಲೆಂಬದೇ ನನ್ನ ನಿಜವಾದ ಉದ್ದೇಶವೆಂದು ಅಶೋಕನು ಎಂದಿರುವನು. ಕೆರೆ-ಕಾಲುವೆಗಳನ್ನು ಕಟ್ಟಿಸಿ ಒಕ್ಕಲತನಕ್ಕೆ ಅನುಕೂಲ ಮಾಡಿಕೊಟ್ಟನು ಜನರ ಶಿಕ್ಷಣಕ್ಕೂ ಉತ್ತೇಜನವನ್ನಿತ್ತನು. ಧರ್ಮಶಿಕ್ಷಣಾ

ರ್ಥವಾಗಿ ಪ್ರಯತ್ನ ಮಾಡಿದವರಲ್ಲಿ ಅಶೋಕನೇ ಅಗ್ರಗಣ್ಯನು. **ನಾಲಂದದ** ಮಹಾ ವಿದ್ಯಾಲಯವನ್ನು ಇವನೇ ಸ್ಥಾಪಿಸಿದನು.

೮. **ಅಶೋಕನ ಯೋಗ್ಯತೆ**:— ಅಶೋಕನಂಥ ಅಸಾಮಾನ್ಯ ಪುರುಷನು ಹುಟ್ಟುವದು ಅಪರೂಪ. ಇವನು ಅತ್ಯಂತ ಸಾತ್ವಿಕನೂ ಪ್ರಜಾಹಿತ ದಕ್ಷನೂ, ರಾಜಕಾರ್ಯನಿಪುಣನೂ, ತೇಜಸ್ವಿಯೂ ಆಗಿದ್ದನು. ಈತನು ಹಿಂಸೆಯಿಂದ ದೂರವಾಗಿರುವನೆಂದು ತಿಳಿದ ಮೇಲೂ ಇವನ ಸಾಮ್ರಾಜ್ಯಾಧಿಕಾರವು ಶಿಥಿಲವಾಗದೆ ಮತ್ತಿಷ್ಟು ಭದ್ರವಾಯಿತು. ಇದರಿಂದ ಅಶೋಕನ ದರ್ಪವೂ ಆಳಿಕೆಯ ಸಾಮರ್ಥ್ಯವೂ ಹೇಗೆ ಇತ್ತೆಂಬದು ಗೊತ್ತಾಗುವದು. ಈ ಜಗದ್ವಿಖ್ಯಾತನಾದ ಮಹಾಪುರುಷನು ಕ್ರಿ. ಶ. ಪೂ. ೨೩೨ರಲ್ಲಿ ಮರಣ ಹೊಂದಿದನು.

೯. **ಅಶೋಕನ ನಂತರದ ಮೌರ್ಯ ಮನೆತನದ ಸ್ಥಿತಿ**:— ಅಶೋಕನ ತರುವಾಯ ಸಮರ್ಥರಾದ ಅರಸರು ಯಾರೂ ಆಗದೆ ಇದ್ದದರಿಂದ ಸಾಮ್ರಾಜ್ಯವು ಕಳೆಗುಂದಹತ್ತಿತು. ಅಶೋಕನ ಮಗನಾದ **ಕುನಾಲ** ಮತ್ತು ಮೊಮ್ಮಗನಾದ **ದಶರಥ** ಇವರ ಆಳಿಕೆಯಲ್ಲಿ ಕಲಿಂಗ ಅಫಗಾನಿಸ್ಥಾನಗಳು ಸ್ವತಂತ್ರವಾದವು. ಅಶೋಕನಿಂದ ಏಳನೆಯವನಾದ **ಬೃಹದ್ರಥ**ನು ಆಳುವಾಗ ಕ್ರಿ. ಶ. ಪೂ. ೧೯೦ರಲ್ಲಿ * **ಬಾಕ್ಟ್ರಿಯದ** ಗ್ರೀಕ ಅರಸನಾದ **ಡೆಮಿಟ್ರಿಯಾಸ**ನು ಹಿಂದುಕುಶ ಪರ್ವತವನ್ನು ದಾಟಿ ಮೌರ್ಯರ ರಾಜ್ಯವನ್ನು ನುಗ್ಗಿ ಈ ಬೃಹದ್ರಥನನ್ನು ಸೋಲಿಸಿದನು. ಕಾಬೂಲ ಪ್ರಾಂತವು ಬೃಹದ್ರಥನ ಕೈಬಿಟ್ಟಿತು. ಗೋದಾವರಿಯ ದಕ್ಷಿಣಕ್ಕೆ ಈ ಮೊದಲೆ ನೆಲೆಗೊಂಡಿದ್ದ **ಆಂಧ್ರರು** ಪ್ರಬಲರಾಗಹತ್ತಿದರು. ಹೀಗೆ **ಇಳಿತರದ** ಸ್ಥಿತಿಯಿರುವಾಗ ಬೃಹದ್ರಥನ ಸೇನಾಪತಿಯಾದ **ಪುಷ್ಯಮಿತ್ರ ಶುಂಗನು** ಬೃಹದ್ರಥನನ್ನು ಕೊಂದು ಮಗಧ ರಾಜ್ಯವನ್ನು ಕೈವಶ ಮಾಡಿಕೊಂಡನು. ಕ್ರಿ. ಶ. ಪೂ. ೧೮೫. ಇಲ್ಲಿಗೆ ಪ್ರಸಿದ್ಧವಾದ ಮೌರ್ಯ ಸಾಮ್ರಾಜ್ಯವು ಮುಗಿಯಿತು.



* ಹಿಂದುಕುಶ ಪರ್ವತಕ್ಕೂ ಆಕ್ಸಸ್ ನದಿಗೂ ನಡುವೆ ಇರುವ ಪ್ರದೇಶಕ್ಕೆ ಬಾಕ್ಟ್ರಿಯ ಎಂಬ ಹೆಸರು.

# ೩ನೆಯ ಪಾಠ.

## ಮೌರ್ಯ ಸಾಮ್ರಾಜ್ಯದ ಅಸ್ತವಾದಂದಿನಿಂದ ಗುಪ್ತ ಮನೆತನದ ಉದಯದ ವರೆಗಿನ ಕಾಲ.

(ಕ್ರಿ. ಶ. ಪೂ. ೧೮೪ ರಿಂದ ಕ್ರಿ. ಶ. ೩೨೦ರ ವರೆಗೆ).



**೧. ಮಿನಾಂಡರ ಅಥವಾ ಮಿಲಿಂದ ರಾಜನು.**— (ಕ್ರಿ. ಶ. ಪೂ. ೧೬೦ ರಿಂದ ಕ್ರಿ. ಶ. ಪೂ. ೧೪೦) ಪುಷ್ಯಮಿತ್ರ ಶುಂಗನು ಮೌರ್ಯ ಸಾಮ್ರಾಜ್ಯವನ್ನು ಮುಗ್ಗಿಸಿ ಮಗಧದ ಸಿಂಹಾಸನವನ್ನು ಆಕ್ರಮಿಸಿದ ಸಂಗತಿಯು ಹಿಂದಿನ ಪಾಠದಲ್ಲಿ ಹೇಳಿದೆ. ಈ ಪುಷ್ಯಮಿತ್ರನು, ದೊರೆತ ರಾಜ್ಯಪದವನ್ನು ಸ್ಥಿರಪಡಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದ್ದನು. ಇದೇ ಸಮಯಕ್ಕೆ ಅತ್ತ ಕಾಬೂಲ ಪ್ರಾಂತವನ್ನು ಆಳುತ್ತಿದ್ದ *ಗ್ರೀಕ ರಾಜನಾದ **ಮಿಲಿಂದ**ನೆಂಬ ಅರಸನು, ಹಿಂದುಸ್ಥಾನದ ಮೇಲೆ ದಂಡೆತ್ತಿ ಬಂದು ಅಯೋಧ್ಯಾ ಪ್ರಾಂತದಲ್ಲಿಯ **ಸಾಕೇತ** ಪಟ್ಟಣವನ್ನೂ ರಾಜಸ್ಥಾನದಲ್ಲಿ ಚಿತ್ತೂರ ಸೆರೆಯ **ನಾಗರೀ** ಪಟ್ಟಣವನ್ನೂ ವಶಮಾಡಿಕೊಂಡು, ತನ್ನ ಅಧಿಕಾರವನ್ನು **ಭಡೋಚ**ದ ವರೆಗೆ ನೆಲೆಸಿದನು. ಮತ್ತು ಕಾಬೂಲದಿಂದ **ಸಿಯಾಲ ಕೋಟ**ಕ್ಕೆ ತನ್ನ ಸಿಂಹಾಸನವನ್ನು ತಂದು ಅಲ್ಲಿ ಇರಹತ್ತಿದನು. ಇವನು ಬೌದ್ಧಧರ್ಮವನ್ನು ಸ್ವೀಕರಿಸಿದನು. ಮಿಲಿಂದನ ಪ್ರಶ್ನೆಗಳೆಂಬ ತಾತ್ವಿಕ ಪ್ರಶ್ನೆಗಳು ಬೌದ್ಧ ವಾಙ್ಮಯದಲ್ಲಿ ಪ್ರಸಿದ್ಧವಾಗಿರುವವು

**೨ ಶುಂಗ ಮನೆತನ.**— (ಕ್ರಿ. ಶ. ಪೂ. ೧೮೪-ಕ್ರಿ. ಶ. ಪೂ. ೭೩). ಮಿಲಿಂದನ ವರ್ಚಸ್ಸು ಮುಂದೆ ಬಹುದಿವಸ ನಡೆಯಲಿಲ್ಲ. ಪುಷ್ಯಮಿತ್ರನು ಪ್ರಬಲನಾಗಿ, ಮಿಲಿಂದನು ಕಾಬೂಲದಲ್ಲಿದ್ದ ಬಂಡಾಯವನ್ನು ಮುರಿಯಲು

* ಗ್ರೀಸದ ದಕ್ಷಿಣದಲ್ಲಿರುವ ಆಯೋನಿಯನ್ ದ್ವೀಪಗಳ ನಿವಾಸಿಗಳಿಗೆ ಯವನರೆಂಬ ಹೆಸರು ಇತ್ತೆಂದು ತೋರುತ್ತದೆ. ಮಿನಾಂಡರನ ಗ್ರೀಕ (ಯವನ) ರಾಜ್ಯವು ಕಾಬೂಲ ಪ್ರಾಂತದಲ್ಲಿ ಸುಮಾರು ಎರಡು ಶತಕಗಳ ವರೆಗೆ ನಡೆದು ಕ್ರಿ. ಶ. ೨೫ ರಲ್ಲಿ ಕುಶಾನರ ದಾಳಿಯಿಂದ ಲಯಹೊಂದಿತು.

ಹೋದ ಸಮಯವನ್ನು ಸಾಧಿಸಿ, ಸಿಂಧುನದಿಯ ವರೆಗಿನ ಪ್ರಾಂತವನ್ನು ಗೆದ್ದುಕೊಂಡನು. ಮತ್ತು ಮೌರ್ಯ ಸಾಮ್ರಾಜ್ಯದ ಕಾಲದ ಬಹುತ ಯಾವತ್ತು ಭಾಗವನ್ನು ಆಕ್ರಮಿಸಿಕೊಂಡು ವಿಜಯಸೂಚಕವಾದ ಅಶ್ವಮೇಧ ಯಜ್ಞವನ್ನು ಮಾಡಿದನು. ಇವನು ಒಳ್ಳೆಯ ಶಿವಭಕ್ತನಾಗಿದ್ದನು. ಅಶೋಕನ ಕಾಲದಿಂದ ಹಿಮ್ಮೆಟ್ಟಹತ್ತಿದ್ದ ಹಿಂದು ಧರ್ಮಕ್ಕೆ ಉತ್ತೇಜನವನ್ನು ಕೊಟ್ಟನು. ಪುಷ್ಯಮಿತ್ರನು ಮೂವತ್ತಾರು ವರುಷ ರಾಜ್ಯವಾಳಿದ ತರುವಾಯ ಇವನ ಮಗನಾದ **ಅಗ್ನಿಮಿತ್ರನು** ಪಟ್ಟಕ್ಕೆ ಬಂದನು. ಈ ಅಗ್ನಿಮಿತ್ರನನ್ನೆ ನಾಯಕನನ್ನಾಗಿ ಮಾಡಿ **ಕಾಲಿದಾಸ**ನೆಂಬ ಪ್ರಸಿದ್ಧನಾದ ಕವಿಯು '**ಮಾಲವಿಕಾಗ್ನಿಮಿತ್ರ**' ಎಂಬ ನಾಟಕವನ್ನು ಸಂಸ್ಕೃತದಲ್ಲಿ ಬರೆದಿರುವನು. ಮುಂದೆ ಈ ಮನೆತನದ ಹತ್ತನೆಯ ಮತ್ತು ಕಡೆಯ ಅರಸನಾದ **ದೇವಭೂತಿಯನ್ನು** ಆವನ ಮಂತ್ರಿಯಾದ **ವಸುದೇವ ಕಣ್ವನು** ಕೊಂದು, ಮಗಧ ರಾಜ್ಯಕ್ಕೆ ಒಡೆಯನಾದನು. ಕ್ರಿ. ಶ. ಪೂ. ೭೩.

೩. **ಕಣ್ವಮನೆತನ**:— (ಕ್ರಿ. ಶ. ಪೂ. ೭೩ ರಿಂದ ಕ್ರಿ. ಶ. ಪೂ. ೨೭) ಕಣ್ವರು, ಬ್ರಾಹ್ಮಣರು. ಈ ವಂಶದ ನಾಲ್ವರು ಅರಸರು ಒಟ್ಟು ೪೫ ವರ್ಷ ರಾಜ್ಯವಾಳಿದರು. ಕುಶಾನರ ದಾಳಿಗಳಿಂದ ಮಗಧದ ರಾಜಸತ್ತೆಯು ಬೀಳುಗುಂದಹತ್ತಿತ್ತು. ಕಣ್ವರ ನಾಲ್ಕನೆಯ ಅರಸನಾದ **ಸುಶರ್ಮನು** ಆಳುತ್ತಿರಲು ಆಂಧ್ರರು ಸಾಗಿಬಂದು ಮಗಧ ರಾಜ್ಯವನ್ನು ಆಕ್ರಮಿಸಿದರು. ಕಣ್ವಮನೆತನದ ಕಡೆಯಾಯಿತು.

೪. **ಶಕರ ದಾಳಿ**:— ಮಗಧ ರಾಜ್ಯದಲ್ಲಿ ಈ ರೀತಿ ಆಗುಹೋಗುಗಳು ನಡೆದಿರಲು ಅತ್ತ ಮಧ್ಯಏಶಿಯದಲ್ಲಿಯೂ ಹಿಂದುಸ್ಥಾನದ ವಾಯವ್ಯಕ್ಕೆ ಇರುವ ಪ್ರದೇಶಗಳಲ್ಲಿಯೂ ಕ್ರಾಂತಿಯೊಂದು ಉಂಟಾಯಿತು. ಅದರ ಪರಿಣಾಮವು ಹಿಂದುಸ್ಥಾನದ ಮೇಲೆ ವಿಶೇಷವಾಯಿತು. ಬಾಕ್ಟ್ರಿಯದ ಉತ್ತರಕ್ಕೆ **ಆಕ್ಸಸ್** ಮತ್ತು **ಜಕ್ಸಾರ್ಟಿಸ್** ನದಿಗಳ ಮಧ್ಯ ಪ್ರದೇಶದಲ್ಲಿ **ಸಿಥಿಯನ್** ಅಥವಾ **ಶಕ** ಎಂಬ ಹೆಸರಿನ ಕಾಡು ಜನಾಂಗದವರು ವಾಸಿಸಿದ್ದರು. ಈ ಶಕ ಜನರ ಪ್ರದೇಶದ ಪೂರ್ವಕ್ಕೆ ಚೀನದ ಪ್ರದೇಶದಲ್ಲಿ **ಯುಏಚಿ** (ಕುಶಾನ) ಜನರು ವಾಸವಾಗಿದ್ದರು. ಅವರಾಚೆಯಲ್ಲಿ **ಹೂಣ** ಎಂಬ ಜನರ ವಸತಿಯಿತ್ತು. ಹೂಣರು ಕುಶಾನರ ಪ್ರದೇಶವನ್ನು ನುಗ್ಗಿ ಅವರನ್ನು ಅಲ್ಲಿಂದ ಓಡಿಸಲು

ಆ ಕುಶಾನರು ಶಕರ ಸೀಮೆಯನ್ನು ಹೊಕ್ಕು ಅವರು ಅಲ್ಲಿ ಇರದಂತೆ ಮಾಡಿದರು. ಆಗ ಶಕರು ತಮ್ಮ ಸ್ಥಳವನ್ನು ಬಿಟ್ಟು ಬಾಕ್ಟ್ರಿಯವನ್ನು ಆಕ್ರಮಿಸಿದರು ಕ್ರಿ ಶ. ಪೂ. ೧೨೦). ಬಳಿಕ ಬಾಕ್ಟ್ರಿಯದ ಗ್ರೀಕರು ಹಿಂದುಕುಶ ಪರ್ವತವನ್ನು ದಾಟಿ ದಕ್ಷಿಣಕ್ಕೆ ಬಂದು ತಮ್ಮ ರಾಜ್ಯವಾಗಿದ್ದ ಕಾಬೂಲ ಪ್ರಾಂತದಲ್ಲಿ ನಿಂತುಕೊಂಡರು. ಇತ್ತ ಬಾಕ್ಟ್ರಿಯವನ್ನು ಆಕ್ರಮಿಸಿದ ಶಕರು ಮತ್ತೆ ದಕ್ಷಿಣಕ್ಕೆ ಸಾಗಿ, **ಸಿಸ್ತಾನ** (ಶಕಸ್ಥಾನ) ಕ್ಕೆ ಬಂದು, ಮುಂಚೆ ಬಂದು ಅಲ್ಲಿ ವಾಸಿಸಿದ್ದ ತಮ್ಮ ಸಂಗಡದವರನ್ನು ಕೂಡಿಕೊಂಡರು ತರುವಾಯ, ಬಲೂಚಿಸ್ಥಾನದ ಬೋಲನ ಕಣಿವೆಯ ಮಾರ್ಗವಾಗಿ ಸಿಂಧ-ಪಂಜಾಬಗಳನ್ನು ಪ್ರವೇಶಿಸಿದರು. **ತಕ್ಷಶಿಲೆ, ಉಜ್ಜಯನಿ, ಮಥುರೆ, ಕಾಠೇವಾಡ** ಎಂಬ ಪ್ರಾಂತಗಳಲ್ಲಿ ಶಕರ ರಾಜ್ಯಗಳು ಉಂಟಾದವು. ಈ ಶಕರ ಅರಸರು ತಮ್ಮನ್ನು **ಸತ್ರಪ** (ಕ್ಷತ್ರಪ) ಅಥವಾ **ಮಹಾಕ್ಷತ್ರಪ**ರೆಂದು ಎನಿಸಿಕೊಳ್ಳಹತ್ತಿದರು ಈ ಕ್ಷತ್ರಪ ರಾಜ್ಯಗಳು ಕ್ರಿ ಶ. ೫ನೆಯ ಶತಕದ ವರೆಗೆ ನಡೆದವು. ಆಂದ್ರರ ಬಲವಾದ ತಡೆಯಾದುದರಿಂದ ಕ್ಷತ್ರಪರಿಂದ ಸಾಮ್ರಾಜ್ಯವನ್ನು ಸ್ಥಾಪಿಸುವದು ಆಗಲಿಲ್ಲ. ಬರಬರುತ್ತ ಆಂಧ್ರರ ಹೊರತಾಗಿ ಉತ್ತರದಲ್ಲಿ ಕುಶಾನರೂ ಪೂರ್ವದಲ್ಲಿ ಗುಪ್ತರೂ ಇವರಿಗೆ ವೈರಿಗಳುಂಟಾದರು. ಆದದರಿಂದ ಶಕರ ಅಧಿಕಾರವು ಬಲಗುಂದತ್ತ ನಡೆಯಿತು.

೫. **ಕುಶಾನರ ದಾಳಿ**:— ಹೂಣರ ನುಗ್ಗುವಿಕೆಯಿಂದ ಕುಶಾನರು ಶಕರ ಸೀಮೆಯಾದ ಆಕ್ಸಸ್ ಮತ್ತು ಜಕ್ಸಾರ್ಟಿಸ್ ನದಿಗಳ ಮಧ್ಯಪ್ರದೇಶಕ್ಕೆ ಬಂದರೆಂದು ಹಿಂದೆ ಹೇಳಿದೆ. ಹೂಣರು ಅಲ್ಲಿಯೂ ಬೆನ್ನಟ್ಟಬರಲು, ಕುಶಾನರು ಮತ್ತೆ ಸ್ಥಾನಾಂತರವನ್ನು ಹೊಂದಿ ಬಾಕ್ಟ್ರಿಯಕ್ಕೆ ಬಂದು, ಅಲ್ಲಿಂದ ಶಕರನ್ನು ಹೊಡೆದೋಡಿಸಿ ತಾವು ಅಲ್ಲಿ ಇರಹತ್ತಿದರು. ಯುಏಚಿ ಜನರಲ್ಲಿ ಕುಶಾನರೆಂಬವರು ಪ್ರಬಲರಾಗಿ, ಎಲ್ಲ ಯುಏಚಿಗಳ ಏಕೀಕರಣವನ್ನು ಮಾಡಿ **ಕಡಫೀಸ್**ನನ್ನು ತಮ್ಮ ಮುಖ್ಯನನ್ನಾಗಿ ಮಾಡಿಕೊಂಡರು. ಈ ಕಡಫೀಸನು ಹಿಂದುಕುಶವನ್ನು ದಾಟಿ ಕಾಬೂಲ ಪ್ರಾಂತದ ಮೇಲೆ ಸಾಗಿಬಂದು ಗ್ರೀಕರನ್ನು ಸೋಲಿಸಿದನು. ಮುಂದೆ ಇವನ ಮಗನಾದ **೨ನೆಯ ಕಡಫೀಸನು** ಕಾಶಿಯ ವರೆಗಿನ ಹಿಂದುಸ್ಥಾನದ ಪ್ರದೇಶವನ್ನು ಗೆದ್ದುಕೊಂಡನು.

**೬. ಕನಿಷ್ಕನ ಸಾಮ್ರಾಜ್ಯ:**— ಕ್ರಿ. ಶ. ೧೨೦ರಲ್ಲಿ **ಕನಿಷ್ಕನು** ಕುಶಾನರ ಅರಸನಾದನು. **ಪುರುಷಪುರ** (ಪೇಶಾವರ) ಎಂಬುವದು ಇವನ ರಾಜಧಾನಿಯು. ಕನಿಷ್ಕನ ರಾಜ್ಯವು ಪೂರ್ವಕ್ಕೆ ಕಾಶಿಯ ವರೆಗೆ, ದಕ್ಷಿಣಕ್ಕೆ ವಿಂಧ್ಯ ಪರ್ವತದ ವರೆಗೆ ಹಬ್ಬಿತ್ತು ಸಿಂಧ, **ಕಾಬೂಲ, ಕಾಶ್ಮೀರ, ಚಾರ್ಕಂದ,**




**ಕುಶಾನರ ಕಾಲದ ಹಿಂದುಸ್ಥಾನ.**

**ಖೋತಾಖಾನ, ಚೀನದ ಕೆಲವು ಭಾಗ** ಇವು ಇವನ ರಾಜ್ಯಕ್ಕೆ ಸೇರಿದ್ದವು. ಪ್ರಾರ್ಥಿಯನರ ಹಾಗು ಕ್ಷತ್ರಪರ ಸಣ್ಣ ಸಣ್ಣ ರಾಜ್ಯಗಳು ಕನಿಷ್ಕನ ಒಡೆತನವನ್ನು ಒಪ್ಪಿಕೊಂಡಿದ್ದವು. ಅಶೋಕನ ತರುವಾಯ ಆದ ಹೆಸರಾದ ಸಾರ್ವಭೌಮನು ಈ ಕನಿಷ್ಕನೆ. ಮಥುರೆಯು ಇವನ ದಕ್ಷಿಣದ ರಾಜಧಾನಿ ಆಗಿತ್ತು.

೭. **ಕನಿಷ್ಕನ ಯೋಗ್ಯತೆ**:— ಕನಿಷ್ಕನು ಸಾಮ್ರಾಜ್ಯಸ್ಥಾಪಕನಾಗಿದ್ದಂತೆ ವಿದ್ಯಾಪಕ್ಷಪಾತಿಯೂ ಬೌದ್ಧಧರ್ಮಾಭಿಮಾನಿಯೂ ಆಗಿದ್ದನು. ಮಹಾಸಭೆಯನ್ನು ನೆರೆಯಿಸಿ ವಿದ್ವಾಂಸರಿಂದ ಬೌದ್ಧ ಧರ್ಮಗ್ರಂಥಗಳ ಮೇಲಿನ ಟೀಕೆಗಳನ್ನು ಬರೆಯಿಸಿದನು. ಬೌದ್ಧತತ್ವಜ್ಞಾನಿಯೂ ಕವಿಯೂ ಆದ **ಅಶ್ವಘೋಷನು** ಈ ಕನಿಷ್ಕನ ಆಸರದಲ್ಲಿದ್ದನು. ಪ್ರಸಿದ್ಧ ವೈದ್ಯಶಾಸ್ತ್ರಕಾರನಾದ **ಚರಕನು** ಕನಿಷ್ಕನ ರಾಜವೈದ್ಯನಾಗಿದ್ದನು. **ನಾಗಾರ್ಜುನ, ವಸುಮಿತ್ರ** ಎಂಬ ಪಂಡಿತರು ಇದೇ ಕಾಲದಲ್ಲಿ ಆಗಿಹೋದರು. ಕನಿಷ್ಕನು ಕ್ರಿ ಶ ೧೬೨ ರಲ್ಲಿ ಮರಣ ಹೊಂದಿದನು.

ಕನಿಷ್ಕನ ತರುವಾಯ ಅವನ ಮಗನಾದ **ಹವಿಷ್ಕನು** ಪಟ್ಟಕ್ಕೆ ಬಂದು ಚನ್ನಾಗಿ ರಾಜ್ಯಕಾರಭಾರವನ್ನು ನಾಗಿಸಿದನು. ಇವನು ಕಾಶ್ಮೀರದಲ್ಲಿಯ ಹವಿಷ್ಕಪುರವನ್ನು ನೆಲೆಸಿದನು. ಇವನ ನಂತರ ವಾಸುದೇವ ಮುಂತಾದ ದುರ್ಬಲ ಅರಸರು ಪಟ್ಟಕ್ಕೆ ಬಂದುದರಿಂದ ಸಾಮ್ರಾಜ್ಯವು ಕಳೆಗುಂದ ಹತ್ತಿತು. ಕುಶಾನರ ಸಾಮ್ರಾಜ್ಯವು ಕ್ರಿ. ಶ. ೨೨೬ ರ ವರೆಗೆ ನಡೆಯಿತು

೮. **ಪಾರ್ಥಿಯನರ ದಾಳಿ**:— ಪಾರ್ಥಿಯನರಲ್ಲಿ ಒಬ್ಬ ಅರಸನಾದ **ಮಿಥ್ರಡೇಟ್ಸ** ಎಂಬವನು ಸಿಂಧುನದದ ವರೆಗೆ ದಂಡೆತ್ತಿ ಬಂದನು. *ಪಾರ್ಥಿಯನರ ಅಧಿಕಾರವು ಸಿಂಧದ ದಕ್ಷಿಣಭಾಗದ ಮೇಲೆ ನಡೆಯುತ್ತಿತ್ತು. ಈ ಮನೆತನದ **ಗೋಂಡೋಫರ್ನೀಸನ** ಆಳಿಕೆಯಲ್ಲಿ ಕ್ರಿಸ್ತ ಧರ್ಮೋಪದೇಶಕನಾದ **ಸೆಂಟಥಾಮುಸನು** ಇವನಲ್ಲಿಗೆ ಬಂದಿದ್ದನು. ಗೋಂಡೋಫರ್ನೀಸನು ಕ್ರಿಶ್ಚನ್ ಧರ್ಮವನ್ನು ಸ್ವೀಕರಿಸಿದ್ದನು ಕ್ರಿ. ಶ. ಎರಡನೆಯ ಶತಕದಲ್ಲಿ ಪಾರ್ಥಿಯನರ ರಾಜ್ಯವು ಕುಶಾನರ ಸಾಮ್ರಾಜ್ಯದಲ್ಲಿ ಕೂಡಿಹೋಯಿತು.

---

* ಬಾಕ್ಟ್ರಿಯದ ನೈಋತ್ಯಕ್ಕಿರುವ ಪ್ರದೇಶಕ್ಕೆ ಪಾರ್ಥಿಯಾ ಎಂಬ ಹೆಸರು.

## ಮೌರ್ಯ ಸಾಮ್ರಾಜ್ಯದ ಅಸ್ತಮಾದಂದಿನಿಂದ ಗುಪ್ತ ಮನೆತನದ ವರೆಗಿನ ಕಾಲ. (ಮುಂದೆ ಸಾಗಿದ್ದು.)



೧. **ಆಂಧ್ರರಾಜ್ಯ** :— ಹಿಂದುಸ್ಥಾನದ ಪಶ್ಚಿಮೋತ್ತರ ಭಾಗಗಳಲ್ಲಿ ಯವನ (ಗ್ರೀಕ), ಶಕ, ಕುಶಾನ, ಮತ್ತು ಪಾರ್ಥಿಯನರೆಂಬ ಪರಕೀಯರು




**ಶಾತವಾಹನರ ರಾಜ್ಯ**

ಒಬ್ಬರ ಹಿಂದೊಬ್ಬರು ಬಂದು ಆಳುತ್ತಿರುವಾಗ ದಕ್ಷಿಣದಲ್ಲಿ **ಆಂಧ್ರರು** ಪ್ರಬಲರಾದರು. ಆಂಧ್ರರು ಆರ್ಯರಲ್ಲದಿದ್ದರೂ, ಅವರು ಸುಧಾರಣೆಯಲ್ಲಿ ಮುಂದುವರಿದವರಾಗಿದ್ದರು. ಅವರ ರಾಜ್ಯವು ಕಲಿಂಗರ ರಾಜ್ಯಕ್ಕೆ ಹೊಂದಿ ಕೃಷ್ಣಾ-

ಗೋದಾವರಿಗಳ ಮಧ್ಯದಲ್ಲಿಯ ಪ್ರದೇಶದಲ್ಲಿ ನೆಲೆಗೊಂಡಿತ್ತು. ಐತರೇಯ ಬ್ರಾಹ್ಮಣಗಳಲ್ಲಿಯ ಒಂದು ಕಥೆಯಲ್ಲಿ ಈ ಆಂಧ್ರರ ಉಲ್ಲೇಖವುಂಟು. ಆದದ ರಿಂದ ಆಂಧ್ರರು ಕ್ರಿ. ಶ ಪೂ. ೧೦೦೦ನೆಯ ವರ್ಷದಿಂದ ಈ ಭಾಗದಲ್ಲಿ ಆಳುತ್ತಿರಬೇಕೆಂದು ತಿಳಿಯುವದು ಕ್ರಿ ಶ. ಪೂ. ೪ನೆಯ ಶತಕದಲ್ಲಿ ಆಂಧ್ರ ರಾಜ್ಯವು ಒಳ್ಳೆಯ ಘನತೆಯನ್ನು ಹೊಂದಿತ್ತು. ಆಗ ಈ ರಾಜರ ಬಳಿಯಲ್ಲಿ ಒಂದುಲಕ್ಷ ಕಾಲಾಳು, ಎರಡು ಸಾವಿರ ಸವಾರರು, ಒಂದು ಸಾವಿರ ಆನೆಗಳು ಇದ್ದವೆಂದು ಪ್ಲಿನೀ ಎಂಬ ರೋಮನ್ ಇತಿಹಾಸಕಾರನು ಬರೆದಿರುವನು. ಇವರ ರಾಜ್ಯದಲ್ಲಿ ಭದ್ರವಾದ ದುರ್ಗಗಳುಳ್ಳ ಮೂವತ್ತು ಪಟ್ಟಣಗಳಿದ್ದವು. ಅಶೋಕನ ಆಳಿಕೆಯಲ್ಲಿ ಆಂಧ್ರರು ಅವನ ಅಧಿಕಾರವನ್ನು ಒಪ್ಪಿಕೊಂಡರು.

**೨. ಆಂಧ್ರ ಭೃತ್ಯರ ಅಥವಾ ಶಾತವಾಹನರ ಮನೆತನ:**— ಆಂಧ್ರ ರಾಜ್ಯವು ಕ್ರಿ. ಶ ಪೂ ೨೪೦ನೆಯ ವರ್ಷ **ಶಾತವಾಹನ** ಮನೆತನದ ವಶವಾಯಿತು. ಈ ಶಾತವಾಹನರಿಗೆ **ಶಾಲಿವಾಹನ**ರೆಂದೂ ಹೆಸರು. **ಸಿಮುಕ**ನೆಂಬವನೇ ಈ ಶಾತವಾಹನ ರಾಜರ ಮೂಲಪುರುಷನು. ಅಶೋಕನ ಮರಣದ ನಂತರ ಈ ಶಾತವಾಹನ ರಾಜರು ಸ್ವತಂತ್ರರಾಗಿ ಪ್ರಬಲರಾಗಹತ್ತಿದರು. ಮುಂದೆ ಇವರ ರಾಜ್ಯ ಪಶ್ಚಿಮಕ್ಕೆ **ನಾಶಿಕ**ದ ವರೆಗೆ ಹಬ್ಬಿತು. ಆಗ ಶಾತವಾಹನರು ತಮ್ಮ ರಾಜಧಾನಿಯನ್ನು **ಪ್ರತಿಷ್ಠಾನ** ಅಥವಾ **ಪೈಠಣಕ್ಕೆ** ತಂದರು. ಈ ಮನೆತನದ ೧೩ನೆಯ ಅರಸನಾದ **ಕುಂತಲಸ್ವಾತಿಕರ್ಣ** ಎಂಬವನು ಕ್ರಿ ಶ. ಪೂ. ೨೭ನೆಯ ವರ್ಷ ಕಾಣ್ವ ಮನೆತನದ **ಸುಶರ್ಮ**ನನ್ನು ತಳ್ಳಿ ಮಗಧ ರಾಜ್ಯವನ್ನು ವಶಮಾಡಿಕೊಂಡನು. ಅಂದಿನಿಂದ ಈ ಮಗಧ ರಾಜ್ಯವು ಮುಂದೆ ೩೦೦ ವರ್ಷಗಳ ವರೆಗೆ ಶಾತವಾಹನರ ವಶದಲ್ಲಿಯೆ ಇತ್ತು. * ಶಾತವಾಹನರು ಮಗಧ ಸಾಮ್ರಾಜ್ಯವನ್ನು ಮುರಿದ ಬಳಿಕ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಸಾಮ್ರಾಜ್ಯದ ವೈಭವದೊಂದಿಗೆ ಉತ್ತರದಿಂದ ಬರುವ ಪರಚಕ್ರಗಳನ್ನು

* ವಾತ್ಸ್ಯಾಯನನ ಕಾಮಸೂತ್ರವೆಂಬ ಗ್ರಂಥದಲ್ಲಿ ಶಾತಕರಣಿ ಎಂಬೊಬ್ಬ ಶಾಲಿವಾಹನ ರಾಜನಿಗೆ 'ಕುಂತಲಾಧೀಶ' ಎಂದೂ ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ ಆ ನಾಡಿಗೆ 'ಶಾತವಾಹನನಾಡು' ಎಂದೂ ಹೆಸರುಗಳಿರುವದರಿಂದ ಶಾತವಾಹನ ರಾಜರು ಕನ್ನಡಿಗರಿರಬೇಕೆಂದು ಕೆಲವರ ಅನುಮಾನ.

ತರುಬಿ ಹಿಂದಕ್ಕಟ್ಟುವ ಕಠಿಣ ಕಾರ್ಯವೂ ಇವರ ಪಾಲಿಗೆ ಬಂದಿತು ಶಕರು ಉತ್ತರ ಹಿಂದುಸ್ಥಾನದ ಪಶ್ಚಿಮೋತ್ತರ ಭಾಗಗಳಲ್ಲಿ ತಮ್ಮ ಅಧಿಕಾರವನ್ನು ನೆಲೆಸಿ ಪಂಜಾಬ, ರಾಜಸ್ಥಾನ, ಕಾಠೇವಾಡ, ಮಾಳವ, ಗುಜರಾಥ ಪ್ರಾಂತಗಳನ್ನು ಗೆದ್ದು, ನರ್ಮದೆಯನ್ನು ದಾಟಿ ನಾಶಿಕ ಪಟ್ಟಣವನ್ನೂ ಹಿಡಿದುಕೊಂಡರು. ಶಕರ ದಾಳಿಯಿಂದ ದೇಶವು ಹಾಳಾಗ ಹತ್ತಿತು. ಜನರು ಬಹು ಕಷ್ಟಕ್ಕೀಡಾದರು. ಆಗ ಶಾತವಾಹನರ ಅತಿ ಪರಾಕ್ರಮಿಯಾದ * ಗೌತಮೀ ಪುತ್ರನಾದ **ಶಾತಕರ್ಣ** (ಸ್ವಾತಿಕರ್ಣ) ನು ಶಕರನ್ನು ನರ್ಮದೆಯ ಆಚೆಗೆ ಓಡಿಸಿದ್ದಲ್ಲದೆ, ಮಾಳವ – ರಾಜಸ್ಥಾನಗಳ ವರೆಗೆ ಬೆನ್ನಟ್ಟಿ ಹೋಗಿ ಅವರನ್ನು ಸಂಪೂರ್ಣವಾಗಿ ಸೋಲಿಸಿದನು. ಈ ಶಾತಕರ್ಣನು ೨೫ ವರ್ಷ ವೈಭವದಿಂದ ಆಳಿದ ತರುವಾಯ ಕ್ರಿ. ಶ ೧೩೦ ರಲ್ಲಿ ಇವನ ಮಗನಾದ **ಪುಲಿಮಾಯಿ** *' **ಶಾಲಿವಾಹನನು** ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಶಕರಿಗೂ ಶಾತವಾಹನರಿಗೂ ಅನೇಕ ಯುದ್ಧಗಳಾದವು. ಮಾಳವದ ಶಕರಾಜನಾದ **ರುದ್ರದಮನನು** ಎಲ್ಲ ಶಕರಲ್ಲಿ ಐಕ್ಯವನ್ನುಂಟುಮಾಡಿಕೊಂಡು ಶಾಲಿವಾಹನನ ನರ್ಮದೆಯ ಉತ್ತರದ ಅಧಿಕಾರವನ್ನು ಕಿತ್ತೊಗೆದು, ನರ್ಮದೆಯನ್ನು ದಾಟಿ ಬರಹತ್ತಿದನು. ಆದರೆ ಶಾಲಿವಾಹನನ ಮುಂದೆ ಅವನ ಆಟವು ನಡೆಯಲಿಲ್ಲ. ರುದ್ರದಮನನಾದರು ಪರಾಕ್ರಮಿಯಾದದರಿಂದ ಶಾಲಿವಾಹನನ ಅಧಿಕಾರವನ್ನು ನರ್ಮದೆಯ ಉತ್ತರದಲ್ಲಿ ಅವನೂ ನಡೆಯಗೊಡಲಿಲ್ಲ ನರ್ಮದೆಯೆ ಶಕ-ಶಾಲಿವಾಹನರ ಮೇರೆಯು ಸ್ಥಿರವಾಯಿತು. ಶಾತವಾಹನರ ಸಾಮ್ರಾಜ್ಯವು ಪೂರ್ವ–ಪಶ್ಚಿಮ ಸಮುದ್ರಗಳ ವರೆಗೆ ಪ್ರಸರಿಸಿತ್ತು ಹಿಂದು ಮತ್ತು ಬೌದ್ಧ ಧರ್ಮಗಳೆರಡೂ ಉತ್ತಮ ಸ್ಥಿತಿಯಲ್ಲಿದ್ದವು. ಈ ಮನೆತನದ ೩೦ ಮಂದಿ ಅರಸರು ಒಟ್ಟಿಗೆ ೪೫೮ ವರ್ಷ ರಾಜ್ಯವಾಳಿದರು. ಕ್ರಿ. ಶ ೨೧೮ ರಲ್ಲಿ ಈ ಮನೆತನದ ಲೋಪವಾಯಿತು.

---

* ಈ ವಿಜಯದಿಂದ ಗೌತಮಿಗೆ ಬಹು ಸಂತೋಷವಾಯಿತೆಂದು ಕಾರ್ಲೆಯ ಕೊರೆದ ಗುಡಿಯೊಳಗಿನ ಒಂದು ಶಿಲಾಲೇಖದಿಂದ ತಿಳಿಯುತ್ತದೆ.

*' ಈ ಶಾಲಿವಾಹನನೇ ದಕ್ಷಿಣ ಹಿಂದುಸ್ಥಾನದಲ್ಲಿ ಈಗಲೂ ನಡೆಯುತ್ತಿರುವ ಶಾಲಿವಾಹನ ಶಕವನ್ನು ಆರಂಭಿಸಿದನು. ಆ ವರೆಗೆ ನಡೆಯುತ್ತ ಬಂದ ಶಕರ ಕಾಲಗಣನೆಯೇ ಶಾಲಿವಾಹನ ಶಕವೆಂಬ ಹೆಸರಿನಿಂದ ಮುಂದೆ ನಡೆಯಹತ್ತಿತು.

೩. **ಧಾರ್ಮಿಕ ಸ್ಥಿತಿ**:— ಶಕ, ಕುಶಾನ, ಮುಂತಾದ ಪರದೇಶದವರ ಬರುವಿಕೆಯಿಂದ ಹಿಂದುಸಂಸ್ಕೃತಿಯ ಮೇಲೆ ವಿಶೇಷ ಪರಿಣಾಮಗಳಾಗಲಿಲ್ಲ. ಹೊರಗಿನಿಂದ ಬಂದ ಈ ಜನರು ತಾವೇ ಹಿಂದು ಅಥವಾ ಬೌದ್ಧಧರ್ಮವನ್ನು ಸ್ವೀಕರಿಸಿದರು. ಇಷ್ಟೇ ಅಲ್ಲ; ಕುಶಾನರ ಕನಿಷ್ಕ ರಾಜನು ಬೌದ್ಧ ಧರ್ಮದ ಪ್ರಸಾರಕ್ಕಾಗಿ ಬಹಳ ಪ್ರಯತ್ನಮಾಡಿದನು. ಶುಂಗ ಮತ್ತು ಕಣ್ವ ಮನೆತನದ ಅರಸರು ಹಿಂದುಧರ್ಮದ ಉತ್ಕರ್ಷಕ್ಕಾಗಿ ಸಾಹಸಮಾಡಿದರು. ಬೌದ್ಧಧರ್ಮದ ಸಾಹಚರ್ಯದಿಂದ ಹಿಂದುಧರ್ಮದಲ್ಲಿ ವಿಶೇಷವಾದ ಹೆಚ್ಚುಕಡಿಮೆಗಳಾದವು. ಕರ್ಮಗಳ ಅತಿರೇಕವು ಇಲ್ಲದಾಯಿತು; ಯಜ್ಞ-ಯಾಗಗಳು ಬಹುತರ ನಿಂತುಹೋದವು, ಬುದ್ಧವಿಹಾರಗಳಂತೆ ಹಿಂದುಗಳು ದೇವಾಲಯಗಳನ್ನು ಕಟ್ಟಹತ್ತಿದರು, ಬ್ರಹ್ಮ-ವಿಷ್ಣು-ಶಿವ ಮೊದಲಾದ ದೇವತೆಗಳ ಮೂರ್ತಿಗಳನ್ನು ಗುಡಿಗಳಲ್ಲಿ ಸ್ಥಾಪಿಸಿ ಅವನ್ನು ಪೂಜಿಸಹತ್ತಿದರು. ಅಶೋಕನ ತರುವಾಯ ದೇಶದಲ್ಲಿ ಹಿಂದು ಮತ್ತು ಬೌದ್ಧ ಧರ್ಮದವರು ತಮ್ಮ ತಮ್ಮ ಧರ್ಮವನ್ನೂ ಹಬ್ಬಿಸುವ ಪ್ರಯತ್ನದಲ್ಲಿದ್ದರು. ಹಿಂದುಗಳು ಬೌದ್ಧಧರ್ಮದಲ್ಲಿಯ ಉತ್ತಮವಾದ ಸಂಗತಿಗಳನ್ನು ಎತ್ತಿಕೊಂಡು ತಮ್ಮ ಧರ್ಮವು ಜನಪ್ರಿಯವಾಗುವಂತೆ ಯತ್ನಿಸುತ್ತಿದ್ದರು. ಅರಸರ ಒಲವಿನಂತೆ ಕೆಲವು ಕಾಲ ಬೌದ್ಧಧರ್ಮಕ್ಕೂ ಕೆಲಕಾಲ ಹಿಂದುಧರ್ಮಕ್ಕೂ ಉತ್ತೇಜನವು ದೊರೆಯುತ್ತಿತು.

೪. **ಆ ಕಾಲದ ಪ್ರಗತಿ**:— ಈಗ ಪ್ರಚಾರದಲ್ಲಿರುವ ಮನುಸ್ಮೃತಿಯೆಂಬ ಗ್ರಂಥವು ಇದೇ ಕಾಲದಲ್ಲಿ ರಚಿತವಾಯಿತು. ಬೌದ್ಧ ಧರ್ಮದ ಪ್ರಸಾರದಿಂದ ಆಗುತ್ತಿದ್ದ ವರ್ಣಸಂಕರವನ್ನು ತಡೆಯುವದೇ ಮನುಸ್ಮೃತಿಯ ಉದ್ದೇಶವಿರಬೇಕೆಂದು ತೋರುತ್ತದೆ. ಆಯಾ ವರ್ಗದವರು ಮಾಡತಕ್ಕ ಕರ್ತವ್ಯಗಳು ಇದರಲ್ಲಿ ವಿವರವಾಗಿ ಹೇಳಲ್ಪಟ್ಟವೆ. ಬೌದ್ಧಧರ್ಮವು ಹಿಮ್ಮೆಟ್ಟಿ ಹಿಂದುಧರ್ಮವು ಮುಂದಡಿಯಿಡಹತ್ತಿದಾಗ ಈ ಮನುಸ್ಮೃತಿಗೆ ಬಹಳ ಮಹತ್ವವುಂಟಾಯಿತು.

ಮನುಸ್ಮೃತಿಯ ಹೊರತಾಗಿ ಜ್ಯೋತಿಷ ಶಾಸ್ತ್ರದ ಗ್ರಂಥಗಳು ಆ ಕಾಲದಲ್ಲಿ ಸಿದ್ಧವಾದವು. ಇವನ್ನು **ಪಾರಾಶರ – ಗರ್ಗ** ಋಷಿಗಳು ಬರೆ

ದರು. ಗ್ರೀಕರು ಜ್ಯೋತಿಷ ಶಾಸ್ತ್ರದಲ್ಲಿ ಹೊಂದಿದ್ದ ಪ್ರಗತಿಯನ್ನು ಇವರು ಅರಿತಿದ್ದರು. ಪಾರಾಶರ ಮತ್ತು **ಯಾಜ್ಞವಲ್ಕ್ಯ** ಋಷಿಗಳು ಬರೆದ ಸ್ಮೃತಿಗಳೂ ಪ್ರಸಿದ್ಧವಾಗಿರುವವು. **ಬೌದ್ಧರ** ಕೊರೆದ ಗುಡಿಗಳೊಳಗಿನ ಕೆತ್ತಿಗೆ, ಸುಳಿವುಗಳು ಆ ಕಾಲದ ಜನರ ಜಾಣ್ಮೆಯ ಸಾಕ್ಷಿಗಳಾಗಿವೆ. ಕಟ್ಟಡಗಳ ಭವ್ಯತೆ ಮತ್ತು ಭದ್ರತೆಗಳನ್ನು ನೋಡಿದರೆ ಆಗಿನ ಶಿಲ್ಪಕಲೆಯು ಎಷ್ಟು ಮೇಲ್ಮೆ ಹೊಂದಿತ್ತೆಂಬುದು ಒಡೆದು ಕಾಣುವದು. ಪುರಾಣಗಳಾದರೂ ಆ ಕಾಲದಲ್ಲಿಯೇ ರಚಿತವಾದವು.

ಹಿಂದುಸ್ಥಾನದ ವ್ಯಾಪಾರವು ರೋಮ ಸಾಮ್ರಾಜ್ಯ, ಏಶಿಯಾ ಮೈನರ, ಅರಬಸ್ತಾನ, ಇರಾಣ, ಚೀನ ಈ ದೇಶಗಳೊಡನೆ ಒಳ್ಳೆಯ ಭರದಿಂದ ನಡೆದಿತ್ತು. ನೂಲು - ರೇಶಿಮೆಗಳ ಜಿನುಗಾದ ಬಟ್ಟೆಗಳು, ಮಸಾಲೆಯ ಪದಾರ್ಥಗಳು, ಆನೆಯ ಹಲ್ಲು ಮುಂತಾದವು ನಮ್ಮ ದೇಶದ ಹಡಗಗಳೊಳಗಿಂದಲೆ ಪರದೇಶಗಳಿಗೆ ಕಳುಹಲ್ಪಡುತ್ತಿದ್ದವು. ಹೆಸರಾದ ಅರಸರು ಸಾಮ್ರಾಜ್ಯಗಳನ್ನು ಸ್ಥಾಪಿಸಿ ದೇಶದ ವ್ಯಾಪಾರೋದ್ಯೋಗಗಳನ್ನು ಊರ್ಜಿತ ಸ್ಥಿತಿಗೆ ತಂದಿದ್ದರು. ಆದದರಿಂದ ಸಿರಿಸಂಪತ್ತುಗಳಿಂದ ಸಮೃದ್ಧವಾದ ಈ ದೇಶವು ಆ ಕಾಲದಲ್ಲಿ ಸುವರ್ಣಭೂಮಿ ಎಂಬ ಹೆಸರು ಪಡೆಯಿತು.

---

## ೫ನೆಯ ಪಾಠ.

### ಗುಪ್ತ ಸಾಮ್ರಾಜ್ಯ.



೧. **ಚಂದ್ರಗುಪ್ತ**:— ಕ್ರಿ ಶ. ೨೫೦ ರ ವರೆಗೆ ಮಗಧ ರಾಜ್ಯವು ಶಾತವಾಹನರ ಅಧಿಕಾರಕ್ಕೆ ಒಳಗಾಗಿತ್ತು. ಮುಂದೆ ಕ್ರಿ. ಶ. ೩೨೦ ರಲ್ಲಿ **ಚಂದ್ರಗುಪ್ತ**ನೆಂಬ ಶೂರಪುರುಷನು ಪಾಟಲೀಪುತ್ರದಲ್ಲಿ ಪ್ರಬಲನಾಗಿ ಮಗಧ ರಾಜ್ಯವನ್ನು ಆಕ್ರಮಿಸಿಕೊಂಡು, ಮಹಾರಾಜ ಎಂಬ ಬಿರುದನ್ನು ಧರಿಸಿ ಸ್ವತಂತ್ರವಾಗಿ ಆಳಹತ್ತಿದನು. ಇವನು ವೈಶಾಲಿಯ **ಲಿಚ್ಛವಿ**ಯೆಂಬ ಮನೆತನದ **ಕುಮಾರದೇವಿ**ಯನ್ನು ಲಗ್ನವಾಗಿದ್ದನು. ರಾಜ್ಯಸ್ಥಾಪನೆಯ

ಕಾರ್ಯದಲ್ಲಿ ಚಂದ್ರಗುಪ್ತನಿಗೆ ಈ ಲಿಚ್ಛವಿಯರ ಬೆಂಬಲವು ಚೆನ್ನಾಗಿ ದೊರೆಯಿತು. ಈತನು ತನ್ನ ಗುಪ್ತಶಕವನ್ನು ಆರಂಭಿಸಿದನು. ಅದು ಉತ್ತರ ಹಿಂದುಸ್ಥಾನದಲ್ಲಿ ಬಹುಕಾಲ ನಡೆಯಿತು ತನ್ನ ಸುವರ್ಣ ನಾಣ್ಯಗಳ ಮೇಲೆ ಅರಸು ಅರಸಿಯರ ಹೆಸರುಗಳನ್ನು ಮುದ್ರಿಸಿದ್ದನು. ಕ್ರಿ. ಶ. ೩೨೦ ರ ಸುಮಾರಕ್ಕೆ ಇವನು ಮರಣಹೊಂದಿದನು.




## ಗುಪ್ತರ ಕಾಲದ ಹಿಂದುಸ್ಥಾನ

೨. **ಸಮುದ್ರಗುಪ್ತ ಚಕ್ರವರ್ತಿ**:— ಚಂದ್ರಗುಪ್ತನ ನಂತರ ಅವನ ಮಗನಾದ **ಸಮುದ್ರಗುಪ್ತನು** ಆಳಹತ್ತಿ ಮಗಧ ರಾಜ್ಯವನ್ನು ಒಳ್ಳೆಯ ಊರ್ಜಿತಸ್ಥಿತಿಗೆ ತಂದನು. ಅಶೋಕನ ತರುವಾಯ ಆದ ಕರ್ತೃತ್ವಶಾಲಿ ಯಾದ ಚಕ್ರವರ್ತಿಯು ಈತನೇ. ಈತನು ಬೌದ್ಧ ಧರ್ಮಿಯಾಗಿರದೆ **ಭಗವದ್ಗೀತೆಯ** ಭಾಗವತ ಧರ್ಮದ ಅನುಯಾಯಿಯಾಗಿದ್ದನು. ಎಲ್ಲಕಡೆಗೆ

ವಿಜಯವನ್ನು ಸಂಪಾದಿಸಿದ ಬಳಿಕ ಇವನು **ಅಶ್ವಮೇಧ ಯಜ್ಞ**ವನ್ನು ಮಾಡಿರಬಹುದಾಗಿ ತೋರುವದು. ಅಶೋಕನು ಧರ್ಮ ಭಾವನೆಯಿಂದ ಕೊರೆಯಿಸಿದ ನೀತಿವಚನಗಳ ಬುಡದಲ್ಲಿಯೇ ಈ ಸಮುದ್ರಗುಪ್ತನು ತನ್ನ ದಿಗ್ವಿಜಯದ ವರ್ಣನೆಯನ್ನು ಬರೆಯಿಸಿರುವನು! **ಕಾಬುಲ**ದಿಂದ **ಆಸಾಮ**ದ ವರೆಗೂ **ನೇಪಾಳ**ದಿಂದ **ಕಾಂಜೀವರಮ**ದ ವರೆಗೂ ಇವನ ರಾಜ್ಯವು ಹಬ್ಬಿತ್ತು. **ಮಹಾಕಾಂತಾರ** (ಒಡಿಸಾ), **ಪಿಷ್ಟಪುರ** (ಆಂಧ್ರ), **ದೇವರಾಷ್ಟ್ರ** (ಮಹಾರಾಷ್ಟ್ರ), **ಕಾಂಚಿ** (ಕಾಂಜೀವರಮ), ಮುಂತಾದ ಹನ್ನೆರಡು ಪ್ರಾಂತಗಳ ರಾಜರನ್ನು ಈತನು ಗೆದ್ದ ಬಳಿಕ, ತನ್ನ ಒಡೆತನವನ್ನು ಅವರು ಒಪ್ಪಿಕೊಂಡಿದ್ದರಿಂದ ಅವರ ಸ್ವಾತಂತ್ರ್ಯವನ್ನು ಮರಳಿಕೊಟ್ಟನು ಪೂರ್ವ-ಪಶ್ಚಿಮ ಮೇರೆಗಳಲ್ಲಿಯ ರಾಜರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡನು. ಉತ್ತರದ ರಾಜರನ್ನು ಪೂರ್ಣವಾಗಿ ಬಗ್ಗುಬಡಿದನು ಎಷ್ಟೋ ಕಾಡುಜನರು ಶರಣು ಬಂದು ಇವನ ಸೇವಕರಾದರು. ವಾಯುವ್ಯ ಮಾರ್ಗವಾಗಿ ಬರುತ್ತಿದ್ದ ಪರಚಕ್ರಗಳನ್ನು ಕಟ್ಟುಮಾಡಿದನು. ಸಿಲೋನದ **ಮೇಘವರ್ಮ**ನು ಸಮುದ್ರಗುಪ್ತನೊಡನೆ ಸ್ನೇಹದಿಂದ ಇರಹತ್ತಿದನು ಈ ಮೇಘವರ್ಮನು, ಬುದ್ಧಗಯೆಗೆ ಬರುವ ಸಿಲೋನದ ಯಾತ್ರಿಕರಿಗೋಸುಗ ಸ್ವತಂತ್ರವಾದ ಧರ್ಮಶಾಲೆ ಯನ್ನೊಂದನ್ನು ಕಟ್ಟಿಸಿಕೊಳ್ಳಲು ಒಪ್ಪಿಗೆಯನ್ನು ಕೇಳಲು, ಸಮುದ್ರಗುಪ್ತನು ಸಂತೋಷದಿಂದ ಈ ಮಾತಿಗೆ ಸಮ್ಮತಿಸಿದನು.

ಹೀಗೆ ಮಾಂಡಲಿಕ ಮತ್ತು ಮಿತ್ರರಾಜರ ಪ್ರೀತಿಪಾತ್ರನೂ, ಪರಾಕ್ರಮಿಯೂ, ಸುಸಂಸ್ಕೃತನೂ ರಾಜಕಾರ್ಯಕುಶಲನೂ ಆದ ಈ ಚಕ್ರವರ್ತಿಯು ಕ್ರಿ. ಶ. ೩೭೫ರಲ್ಲಿ ಮರಣಹೊಂದಿದನು. ಇವನಿಗೆ **ಬಾಲಾದಿತ್ಯ, ವಿಕ್ರಮಾದಿತ್ಯ, ಚಂದ್ರಪ್ರಕಾಶ** ಎಂಬ ಬಿರುದುಗಳಿದ್ದವು.

೩. **ವಿಕ್ರಮಾದಿತ್ಯ**:— ಸಮುದ್ರಗುಪ್ತನ ತರುವಾಯ ಅವನ ಮಗನಾದ **೨ನೆಯ ಚಂದ್ರಗುಪ್ತನು** ವಿಕ್ರಮಾದಿತ್ಯ ಎಂಬ ಹೆಸರಿನಿಂದ ಪಟ್ಟಕ್ಕೆ ಕುಳಿತನು. ಪಂಜಾಬ, ಬಂಗಾಲ ಪ್ರಾಂತಗಳ ಮೇಲೆ ದಂಡೆತ್ತಿ ಹೋಗಿ ಅವನ್ನು ವಶಮಾಡಿಕೊಂಡನು. ಮಾಳವದ ಕ್ಷತ್ರಪರನ್ನು ಸೋಲಿಸಿ, ಉಜ್ಜಯಿನಿಯನ್ನು ತಕ್ಕೊಂಡು ಅಲ್ಲಿಗೆ ತನ್ನ ಸಿಂಹಾಸನವನ್ನು ತಂದನು. ಉಜ್ಜ

ಯಿನಿಯು ಆ ಕಾಲದ ವ್ಯಾಪಾರದ ಮುಖ್ಯ ಕೇಂದ್ರವಾಗಿತ್ತು. ಖಂಬಾಯತದ ಮಾರ್ಗವಾಗಿ ಬಂದ ಪರದೇಶದ ಸರಕುಗಳು ಉಜ್ಜಯಿನಿಗೆ ಬಂದಬಳಿಕ ಅಲ್ಲಿಂದ ಉತ್ತರಹಿಂದುಸ್ಥಾನದ ಎಲ್ಲ ಭಾಗಗಳಿಗೆ ಹೋಗುತ್ತಿದ್ದವು. ಈ ವಿಕ್ರಮಾದಿತ್ಯನು ನ್ಯಾಯಪ್ರಿಯನೆಂದು ಖ್ಯಾತಿಗೊಂಡು ಕ್ರಿ ಶ. ೩೭೫ರಿಂದಕ್ರಿ. ಶ. ೪೧೩ರ ವರೆಗೆ ಆಳಿದನು. ಉತ್ತರ ಹಿಂದುಸ್ಥಾನದಲ್ಲಿ ನಡೆಯುತ್ತಲಿದ್ದ ಕಾಲಗಣನೆಗೆ '**ವಿಕ್ರಮಸಂವತ್**' ಎಂಬ ಹೆಸರು ಈ ವಿಕ್ರಮಾದಿತ್ಯನಿಂದಉಂಟಾಯಿತು. ದಕ್ಷಿಣ ಹಿಂದುಸ್ಥಾನದಲ್ಲಿ ಶಾಲಿವಾಹನ ಶಕವು ನಡೆಯುತ್ತಿರುವಂತೆ ಉತ್ತರ ಹಿಂದುಸ್ಥಾನದಲ್ಲಿ ವಿಕ್ರಮ ಸಂವತ್ತು ಈಗಲೂ ನಡೆಯುತ್ತದೆ.

**ಫಾಹ್ಯೆನ**ನೆಂಬ ಚೀನ ದೇಶದ ಯಾತ್ರಿಕನು ಬುದ್ಧರ ಪವಿತ್ರ ಸ್ಥಳಗಳನ್ನು ನೋಡಲೋಸುಗ ಈ ವಿಕ್ರಮಾದಿತ್ಯನ ಕಾಲದಲ್ಲಿ ಹಿಂದುಸ್ಥಾನಕ್ಕೆ ಬಂದು ಹೋದನು. ಕ್ರಿ. ಶ. ೪೦೫ ರಿಂದ ಕ್ರಿ. ಶ. ೪೧೧ರ ವರೆಗೆ ಎಂದರೆ ೬ ವರ್ಷ ಇವನು ಈ ದೇಶದಲ್ಲಿ ಸಂಚಾರಮಾಡಿದನು. ಇವನು ಬರೆದಿಟ್ಟ ಸಂಗತಿಗಳಿಂದ ಆ ಕಾಲದ ಹಿಂದುಸ್ಥಾನವು ಎಲ್ಲ ಬಗೆಯಿಂದಲೂ ಶ್ರೇಷ್ಠತೆಯನ್ನು ಪಡೆದಿತ್ತೆಂದು ತಿಳಿಯುವದು. ಹಿಂದುಸ್ಥಾನವು ಸುಖಸಂಪತ್ತು-ವಿದ್ಯೆ ಕಲೆಗಳ ಆಗರವೆನಿಸಿತ್ತು. ಏಶಿಯಾ ಖಂಡದ ಬಹುಭಾಗದಲ್ಲಿ ಆರ್ಯಸಂಸ್ಕೃತಿಯೇ ಹಬ್ಬಿಗೊಂಡಿದ್ದು ಹಿಂದುಸ್ಥಾನವು ಆ ಸಂಸ್ಕೃತಿಯ ಕೇಂದ್ರವೆನಿಸಿತ್ತು ಬೇರೆ ಬೇರೆ ದೇಶಗಳ ವಿದ್ವಾಂಸರು ಸಂಸ್ಕೃತಿಯ ಅಭ್ಯಾಸಕ್ಕಾಗಿ ಈ ದೇಶಕ್ಕೆ ಬರುತ್ತಿದ್ದರು. ಫಾಹ್ಯೆನನು ಇಲ್ಲಿಯ ಆ ಕಾಲದ ಲೋಕಸ್ಥಿತಿಯ ವಿಷಯವಾಗಿ ಕೆಳಗಿನಂತೆ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವನು

"ಜನರು ಪ್ರಾಮಾಣಿಕರಾಗಿರುವರು. ಹಿಂದು ಮತ್ತು ಬೌದ್ಧ ಇವರಲ್ಲಿ ಪ್ರೇಮದ ಬಳಕೆಯಿದೆ. ಜನರು ಪ್ರಾಣಿಗಳನ್ನು ಹಿಂಸಿಸುವದಿಲ್ಲ. ಮದ್ಯವನ್ನು ಕುಡಿಯುವದಿಲ್ಲ. ಬೆಳ್ಳುಳ್ಳಿ ಮುಂತಾದ ಪದಾರ್ಥಗಳನ್ನು ತಿನ್ನುವದಿಲ್ಲ. ಧನಿಕರು ಬಡವರಿಗಾಗಿ ಔಷಧಾಲಯಗಳನ್ನು ಇರಿಸಿರುವರು. ಪ್ರಯಾಣಿಕರಿಗೋಸುಗ ಅಲ್ಲಲ್ಲಿ ಧರ್ಮಶಾಲೆಗಳಿರುವವು. ರಾಜರು ಪ್ರಜೆಗಳಿಗೆ ಭಾರವೆನಿಸುವ ಕರಗಳನ್ನು ಎತ್ತುವದಿಲ್ಲ. ಅಪರಾಧಿಗಳಿಗೆ ಕೊಟ್ಟ ಶಿಕ್ಷೆಗಳು ಹಗುರಾ

ಗಿರುವವು. ಮರಣದ ಶಿಕ್ಷೆಯನ್ನು ಕೊಡುವದಿಲ್ಲ. ಅರಸರ ಓಲಗದಲ್ಲಿ ಕವಿಗಳೂ, ವಿದ್ವಾಂಸರೂ ಬಹು ಜನರು ಇರುವರು. ಶಾಸ್ತ್ರ-ಕಲೆಗಳು ಅಭಿವೃದ್ಧಿಯನ್ನು ಹೊಂದಿರುವವು."

೪. **ಗುಪ್ತಮನೆತನದ ಉಳಿದ ಅರಸರು** :— ವಿಕ್ರಮಾದಿತ್ಯನ (೨ನೆಯ ಚಂದ್ರಗುಪ್ತ) ತರುವಾಯ ಅವನ ಮಗನಾದ **ಕುಮಾರಗುಪ್ತ**ನು ಪಟ್ಟಕ್ಕೆ ಬಂದು ದಿಗ್ವಿಜಯ ಸೂಚಕವಾದ ಅಶ್ವಮೇಧ ಯಜ್ಞವನ್ನು ಮಾಡಿದನು. ಕ್ರಿ. ಶ. ೪೫೫ ರಲ್ಲಿ ಕುಮಾರಗುಪ್ತನು ಮರಣ ಹೊಂದಲು ಅವನ ಮಗನಾದ **ಸ್ಕಂದಗುಪ್ತ**ನು ಆಳಹತ್ತಿದನು. ಈ ಕಾಲದಲ್ಲಿ **ಹೂಣ**ರೆಂಬವರು ವಾಯುವ್ಯಮಾರ್ಗವಾಗಿ ಹಿಂದುಸ್ಥಾನದ ಮೇಲೆ ದಾಳಿಯ ಮಾಡಿದರು. ಸ್ಕಂದಗುಪ್ತನು ಶೌರ್ಯದಿಂದ ಈ ಹೂಣರನ್ನೆದುರಿಸಿ ಹಿಂದಕ್ಕಟ್ಟಿದನು. ಕ್ರಿ. ಶ. ೪೮೦ರಲ್ಲಿ ಸ್ಕಂದಗುಪ್ತನು ಸಾಯಲು **ಪುರಗುಪ್ತ, ನರಸಿಂಹಗುಪ್ತ, ಕುಮಾರಗುಪ್ತ, ಬುದ್ಧಗುಪ್ತ, ಭಾನುಗುಪ್ತ** ಮುಂತಾದವರು ರಾಜ್ಯವಾಳಿದರು. ಹೂಣರ ಮುಖ್ಯಸ್ಥನಾದ **ತೋರಮಾನ**ನು ಕ್ರಿ ಶ. ೪೯೯ರಲ್ಲಿ ಗುಪ್ತರ ಮೇಲೆ ಸಾಗಿಬಂದು ಅವರನ್ನು ಸೋಲಿಸಿ ಉಜ್ಜಯನಿ ಪ್ರಾಂತವನ್ನು ವಶಮಾಡಿಕೊಂಡನು. ಗುಪ್ತರು ಮೇಲಿಂದಮೇಲೆ ಈ ಹೂಣರೊಡನೆ ಯುದ್ಧ ಮಾಡಬೇಕಾದುದರಿಂದಲೂ ಸ್ಕಂದಗುಪ್ತನ ತರುವಾಯ ಸಮರ್ಥರಾರೂ ಆಗದೆಯಿದ್ದದರಿಂದಲೂ ಗುಪ್ತಸಾಮ್ರಾಜ್ಯವು ಬಲಗುಂದಿತು. ಭಾನುಗುಪ್ತನು ಹೂಣರೊಡನೆ ಕಾದುವಾಗ ಕ್ರಿ. ಶ. ೫೧೦ ರಲ್ಲಿ ಹತನಾದನು. ಮಾಂಡಲಿಕ ರಾಜರು ಸ್ವತಂತ್ರರಾದರು. ಮುಂದೆ ಈ ಗುಪ್ತವಂಶಜರು ಮಗಧದ ಭಾಗವನ್ನು ಕ್ರಿ. ಶ. ೭೩೨ ರ ವರೆಗೆ ಆಳುತ್ತಿದ್ದರು.

೫. **ಗುಪ್ತರ ಕಾಲದ ದೇಶದ ಸ್ಥಿತಿ** :— ಗುಪ್ತ ಸಾಮ್ರಾಜ್ಯದ ಕಾಲಕ್ಕೆ 'ಸುವರ್ಣಯುಗ' ಎಂಬ ಹೆಸರು. ಆ ಕಾಲದ ಸ್ಥಿತಿಯು ಈ ಹೆಸರಿಗೆ ತಕ್ಕಂತೆಯೆ ಇತ್ತು. ಗುಪ್ತರಾಜರು ಸುವಿಚಾರಿಗಳಾಗಿದ್ದದರಿಂದ ಪ್ರಜೆಗಳಿಗೆ ಶಾಂತಿ-ಸುಖಗಳು ಲಭಿಸಿದವು. ಎಲ್ಲ ಬಗೆಯಿಂದ ದೇಶದ ಏಳ್ಗೆಯಾಯಿತು. ಈ ಅರಸರು ಹಿಂದುಧರ್ಮಿಗಳಾಗಿದ್ದದರಿಂದ ಇವರಿಂದ ಹಿಂದುಧರ್ಮದ ಉತ್ಕರ್ಷಕ್ಕೆ ಸಹಾಯವಾಯಿತು. ಹೀಗಿದ್ದರೂ ಉಳಿದ ಧರ್ಮದವರಿಗೆ

ಎಷ್ಟೊ ತೊಂದರೆಯಾಗುತ್ತಿದ್ದಿಲ್ಲ. ಸಂಸ್ಕೃತ ಭಾಷೆಯು ಪೂರ್ಣವಾಗಿ ಸುಧಾರಣೆಯನ್ನು ಹೊಂದಿತು. ಗುಪ್ತರ ಕಾಲದ ಕಟ್ಟಡಗಳು ಅಪ್ರತಿಮ ವಾಗಿವೆ. ಕಾಶೀ ಮುಂತಾದ ಪಟ್ಟಣಗಳಲ್ಲಿ ಹಲವು ಭವ್ಯವಾದ ದೇವಾಲಯ



**ಕಾಶೀ ಪಟ್ಟಣದ ದೇವಾಲಯ**

ಗಳು ಕಟ್ಟಲ್ಪಟ್ಟವು. ಅಜಂತೆಯ ಕಲ್ಮನೆಯ ಕೆತ್ತಿಗೆಯೂ ದಿಲ್ಲಿಯ ಬಳಿ ಯಲ್ಲಿ ಈಗಲೂ ನಿಂತಿರುವ ಜಂಗುಹತ್ತದಂಥ ಕಬ್ಬಿಣದ ಭವ್ಯವಾದ ಸ್ತಂಭ ಗಳೂ ಆಗಿನ ಶಿಲ್ಪಕಲೆಯ ಮೇಲ್ಮೆಯ ಸಾಕ್ಷಿಗಳಾಗಿವೆ. ಉತ್ತಮ ತರದ ನಾಣ್ಯಗಳು ಅದೇ ಕಾಲದಲ್ಲಿ ಅಚ್ಚು ಹಾಕಲ್ಪಟ್ಟವು. ಸಂಗೀತ ಕಲೆಯಲ್ಲಿ ಯೂ ಆಗಿನವರು ಒಳ್ಳೆಯ ಪ್ರಗತಿಯನ್ನು ಹೊಂದಿದ್ದರು.

# ೬ನೆಯ ಪಾಠ.

## ಶ್ರೀಹರ್ಷನ ಸಾಮ್ರಾಜ್ಯ.

(ಕ್ರಿ. ಶ. ೬೦೬ – ಕ್ರಿ. ಶ ೬೪೭)



೧. **ಮಾಳವದ ಯಶೋಧರ್ಮ:—** ಗುಪ್ತರು ಬಲಗುಂದುತ್ತಿದ್ದಾಗ ಹೂಣರನ್ನು ತಡೆಯುವ ಕಾರ್ಯವನ್ನು **ಯಶೋಧರ್ಮ**ನೆಂಬ ಪರಾಕ್ರಮಿಯು ಕೈಕೊಂಡನು. ಇವನು ಮಾಳವ ಪ್ರಾಂತವನ್ನು ಹೂಣರಿಂದ ಸೆಳೆದುಕೊಂಡು ಸ್ವತಂತ್ರವಾಗಿ ಆಳಹತ್ತಿದನು. ವಿಕ್ರಮಾದಿತ್ಯ ಎಂಬ ಬಿರುದನ್ನು ಧರಿಸಿ ಗುಪ್ತರ ಅಧಿಕಾರವನ್ನು ಹಿಮ್ಮೆಟ್ಟಿಸಿ ಸಾರ್ವಭೌಮನೆನಿಸಿಕೊಂಡನು. ಈತನು ವಿದ್ಯಾಪಕ್ಷಪಾತಿಯಾಗಿದ್ದು ಕವಿಕುಲಗುರುವಾದ **ಕಾಲಿದಾಸ**ನಿಗೆ ಆಶ್ರಯವನ್ನು ಕೊಟ್ಟಿದ್ದನು. ಕಾಲಿದಾಸ ಕವಿಯಿಂದ ರಚಿತವಾದ **ರಘುವಂಶ ಶಾಕುಂತಲ** ಮೊದಲಾದ ಗ್ರಂಥಗಳು ಒಳ್ಳೆಯ ಹೆಸರಾಗಿರುವವು. ಈ ಅರಸರು ಕ್ರಿ. ಶ. ೫೨೮ ರಿಂದ ೫೮೩ರ ವರೆಗೆ ೫೫ ವರ್ಷ ವೈಭವದಿಂದ ಆಳಿದರು. **ಶ್ರೀಹರ್ಷ**ನು ಕ್ರಿ. ಶ. ೬೦೬ರಲ್ಲಿ ಈ ರಾಜ್ಯವನ್ನು ತೆಗೆದುಕೊಂಡನು.

೨. **ವಲ್ಲಭಿ ಹಾಗು ಸ್ಥಾನೇಶ್ವರ ಮನೆತನಗಳು.—** ಭಟ್ಟಾರ್ಕನೆಂಬವನು ಕ್ರಿ ಶ. ೫೦೦ ರಲ್ಲಿ ಕಾಠೇವಾಡದಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿ **ವಲ್ಲಭಿ** ಎಂಬ ಪಟ್ಟಣದಲ್ಲಿ ಆಳಹತ್ತಿದನು. ಈ ಮನೆತನದ ನಾಲ್ಕನೆಯ ಅರಸನಾದ **ಗುಡಸೇನ**ನು ಗುಪ್ತರ ಮೇಲಧಿಕಾರವನ್ನು ಕಿತ್ತೊಗೆದು ಸ್ವತಂತ್ರನಾದನು ಈ ಮನೆತನದವರು ಹರ್ಷನ ಕಾಲದಲ್ಲಿ ಅವನ ಮಾಂಡಲಿಕರಾದರು. ಹರ್ಷನ ತರುವಾಯ ಮತ್ತೆ ಸ್ವತಂತ್ರರಾಗಿ ಆಳಹತ್ತಿದರು ಈ ಮನೆತನವು ಕ್ರಿ ಶ ೭೬೬ರ ವರೆಗೆ ಸಾಗಿ ಮುಸಲ್ಮಾನರ ಕೈಸೇರಿತು.

**ಸ್ಥಾ**ನೇಶ್ವರದ ರಾಜರಾದರೂ ಕೂಡ ಗುಪ್ತರಿಂದ ಸ್ವತಂತ್ರರಾದರು. ಈ ಸ್ಥಾನೇಶ್ವರದ ರಾಜ್ಯವು ಆರನೆಯ ಶತಕದಲ್ಲಿ ಒಳ್ಳೆಯ ಹೆಸರಾಗಿತ್ತು. ಈ ಮನೆತನದ **ಪ್ರಭಾಕರವರ್ಧನ**ನೆಂಬವನು ೬ನೆಯ ಶತಕದ ಕೊನೆಗೆ ಪಂಜಾಬದಲ್ಲಿಯ ಹೂಣರನ್ನು ಸೋಲಿಸಿದನು. ಮತ್ತು ಮಾಳವ– ಗುಜರಾಥಗಳ

ಅರಸರನ್ನು ಗೆದ್ದು ತನ್ನ ಮಾಂಡಲಿಕರನ್ನು ಮಾಡಿಕೊಂಡನು. ಪ್ರಭಾಕರ ವರ್ಧನನ ತರುವಾಯ **ರಾಜವರ್ಧನನು** ರಾಜನಾದನು. ಈತನ ತಂಗಿಯಾದ **ರಾಜಶ್ರೀ** ಎಂಬವಳು ಕನೋಜದ ರಾಜನಾದ **ಗೃಹವರ್ಮನಿಗೆ** ಕೊಡಲ್ಪಟ್ಟಿದ್ದಳು. ಗೃಹವರ್ಮನಿಗೂ ಮಾಳವದ **ದೇವಗುಪ್ತನಿಗೂ** ಹಗೆತನವಿತ್ತು. ದೇವಗುಪ್ತನು ಕನೋಜದ ಮೇಲೆ ಸಾಗಿ ಗೃಹವರ್ಮನನ್ನು ಕೊಂದನು. ರಾಜಶ್ರೀಯು ಸೆರೆಸಿಕ್ಕಳು. ಆಗ ಈಕೆಯ ಅಣ್ಣನಾದ ರಾಜವರ್ಧನನು ದೇವಗುಪ್ತನನ್ನು ಮುತ್ತಿ ಅವನನ್ನು ಕೊಂದು ಹಾಕಿದನು. ಅಷ್ಟರಲ್ಲಿ ದೇವಗುಪ್ತನ ಸಹಾಯಕನಾದ ಬಂಗಾಲ ಪ್ರಾಂತದ **ಶಶಾಂಕಗುಪ್ತನು** ಕಪಟದಿಂದ ರಾಜವರ್ಧನನನ್ನು ಕೊಂದನು. ರಾಜವರ್ಧನನು ಸಾಯಲು ೧೬ ವರ್ಷದ **ಶ್ರೀಹರ್ಷನು** ಅಣ್ಣನನ್ನು ಕೊಂದ ಶಶಾಂಕನನ್ನೂ ಮಾಳವದವರ ಸೈನ್ಯವನ್ನೂ ಪೂರ್ಣವಾಗಿ ನೋಲಿಸಿ, ವಿಂಧ್ಯಾದ್ರಿಯ ಅರಣ್ಯದಲ್ಲಿದ್ದ ರಾಜಶ್ರೀಯನ್ನು ಕರೆತಂದು ಆಕೆಯ ಸಹಾಯದಿಂದ ಕನೋಜದಲ್ಲಯೆ ಸಾರ್ವಭೌಮನಾಗಿ ಆಳಹತ್ತಿದನು.

**೩. ಸಾರ್ವಭೌಮನಾದ ಶ್ರೀಹರ್ಷನು :—** (ಕ್ರಿ. ಶ. ೬೦೬ರಿಂದ ಕ್ರಿ. ಶ. ೬೪೭) ಪ್ರಭಾಕರವರ್ಧನನು ಸಾಯುವ ಸಮಯದಲ್ಲಿ ಕನೋಜದ ರಾಜ್ಯಕ್ಕೆ ಹೂಣರ ಕಾಟವಿತ್ತು ಗೌಡ-ಮಾಳವಗಳ ಅರಸರು ಒಟ್ಟಾಗಿ ಕನೋಜ ಮತ್ತು ಸ್ಥಾನೇಶ್ವರ ಇವುಗಳನ್ನು ಕೈಸೇರಿಸಿಕೊಳ್ಳುವ ಯತ್ನವನ್ನೂ ನಡೆಯಿಸಿದ್ದರು ಇಂಥ ಪ್ರಸಂಗದಲ್ಲಿ ಶ್ರೀಹರ್ಷನು ಅಧಿಕಾರವನ್ನು ವಹಿಸಿ ಪಂಜಾಬ, ಸಿಂಧ, ಕಾಠೇವಾಡ (ವಲ್ಲಭ), ನೇಪಾಳಗಳಲ್ಲಿ ತನ್ನ ವರ್ಚಸ್ಸನ್ನು ನೆಲೆಸಿದನು. ಶಶಾಂಕನನ್ನು ಪೂರ್ವಕ್ಕೆ ಅಟ್ಟಿ ಪಶ್ಚಿಮಕ್ಕೆ ಅಡಿಯಿಡದಂತೆ ಕಟ್ಟುಮಾಡಿದನು. **ಕಾಮರೂಪ** (ಆಸಾಮು)ದ **ಕುಮಾರರಾಜನೊಡನೆ** ಸಖ್ಯವನ್ನು ಬೆಳೆಸಿದನು. ಈ ಕುಮಾರರಾಜನು ಬಹು ಬೆಲೆಯುಳ್ಳ ಒಂದು ಶ್ವೇತಛತ್ರವನ್ನು ಸಾರ್ವಭೌಮತ್ವದ ಗುರುತೆಂದು ಶ್ರೀಹರ್ಷನಿಗೆ ಅರ್ಪಿಸಿದನು. ಈ ಪ್ರಕಾರ ಬಹುತರ ಇಡೀ ಉತ್ತರ ಹಿಂದುಸ್ಥಾನವು ಇವನ ಅಧಿಕಾರಕ್ಕೆ ಒಳಗಾಯಿತು. ಇದೇ ಕಾಲಕ್ಕೆ ದಕ್ಷಿಣ ಹಿಂದುಸ್ಥಾನದಲ್ಲಿ ಬಾದಾಮಿಯ ಚಾಲುಕ್ಯರ **೨ನೆಯ ಪುಲಿಕೇಶಿಯು** ಸಾಮ್ರಾಜ್ಯಾಧಿಕಾರಿಯಾಗಿದ್ದನು. ಹರ್ಷನು ನರ್ಮದೆಯನ್ನು ದಾಟಿ ಪುಲಿಕೇಶಿಯ ರಾಜ್ಯವನ್ನು ಪ್ರವೇಶಿಸಲು

ಪುಲಿಕೇಶಿಯು ಹರ್ಷನನ್ನು ತಡೆದು ಸೋಲಿಸಿ ಹಿಂದಕ್ಕಟ್ಟಿದನು. ಅಂದಿನಿಂದ ನರ್ಮದಾನದಿಯೇ ಹರ್ಷ ಸಾಮ್ರಾಜ್ಯದ ದಕ್ಷಿಣ ಮೇರೆಯಾಯಿತು. ಒಂದು ಲಕ್ಷ ಕುದುರೆಯ ಸವಾರರೂ ಅರವತ್ತು ಸಾವಿರ ಆನೆಗಳೂ ಹರ್ಷನ ಬಳಿಯಲ್ಲಿದ್ದವು ಈ ಅದ್ಭುತವಾದ ಸೈನ್ಯದ ಬೆಂಬಲವಿದ್ದದರಿಂದ ಇವನ ರಾಜ್ಯದ ಮೇಲೆ ಯಾರೂ ಕೈಯೆತ್ತದಂತಾಯಿತು.




**ಶ್ರೀಹರ್ಷನ ಕಾಲದ ಹಿಂದುಸ್ಥಾನ.**

೪. **ಬೌದ್ಧ ಧರ್ಮಕ್ಕೆ ಕೊಟ್ಟ ಆಶ್ರಯ**:— ಆರು ವರ್ಷಗಳ ವರೆಗೆ ಬಹು ಶ್ರಮಪಟ್ಟು ಎಲ್ಲ ಶತ್ರುಗಳನ್ನು ಅಡಗಿಸಿದ ಬಳಿಕ ಹರ್ಷನು ಉಳಿದ ಆಯುಷ್ಯವನ್ನು ಬೌದ್ಧ ಧರ್ಮದ ಪ್ರಸಾರದಲ್ಲಿಯೇ ಕಳೆದನು. **ದಿವಾಕರಮಿತ್ರ**ನೆಂಬ ಬೌದ್ಧಸನ್ಯಾಸಿಯ ಸಹವಾಸದಿಂದಲೂ ಬಾಲ್ಯದಿಂದಲೆ ಒದಗಿದ

ಅನೇಕ ಸಂಕಟಗಳ ಆಘಾತಗಳಿಂದಲೂ ಈತನಲ್ಲಿ ಬೌದ್ಧ ಧರ್ಮದ ವಿಷಯದ ಪ್ರೀತಿಯೂ ವೈರಾಗ್ಯವೂ ಉಂಟಾದವೆಂದು ತೋರುವದು. ಬೌದ್ಧ ಧರ್ಮ ವನ್ನು ಸ್ವೀಕರಿಸಿ, ರಾಜ್ಯದಲ್ಲಿ ಆಗುತ್ತಿದ್ದ ಹಿಂಸೆಯನ್ನು ನಿಲ್ಲಿಸಿದನು. ಬೌದ್ಧ ಭಿಕ್ಷುಗಳಿಗಾಗಿ ವಿಹಾರಗಳನ್ನು ಕಟ್ಟಿಸಿದನು. ವರ್ಷಕ್ಕೊಮ್ಮೆ ಬೌದ್ಧ ಭಿಕ್ಷು ಗಳನ್ನು ನೆರೆಯಿಸಿ ಇಪ್ಪತ್ತೊಂದು ದಿವಸಗಳವರೆಗೆ ಧರ್ಮ ಸಂಬಂಧವಾದ ಚರ್ಚೆಯನ್ನು ಮಾಡಿಸುವನು. ಚೀನದ ಪ್ರವಾಸಿಯಾದ **ಹುವೆನ್‌ತ್ಸಂಗನು** ಬುದ್ಧಧರ್ಮದ ಜ್ಞಾನವನ್ನು ಸಂಪಾದಿಸುವದಕ್ಕಾಗಿ ಹರ್ಷನಲ್ಲಿಗೆ ಬರಲು, ಹರ್ಷನು ದೊಡ್ಡ ಧರ್ಮಸಭೆಯೊಂದನ್ನು ಕನೋಜದಲ್ಲಿ ನೆರೆಯಿಸಿದನು.

೫. **ಶ್ರೀಹರ್ಷನ ದಾತೃತ್ವ**:— ಹರ್ಷನು ಪರಾಕ್ರಮದಲ್ಲಿ ಸಮುದ್ರ ಗುಪ್ತನನ್ನು ಹೋಲುತ್ತಿರುವಂತೆ ದಾತೃತ್ವದಲ್ಲಿ ಅಶೋಕನನ್ನು ಹೋಲುತ್ತಿ ದ್ದನು. ಪ್ರಯಾಗದಲ್ಲಿ ಐದು ವರ್ಷಕ್ಕೊಮ್ಮೆ ದೊಡ್ಡ ಜಾತ್ರೆಯನ್ನು ನೆರೆಯಿಸಿ ದಾನಧರ್ಮಗಳನ್ನು ಆಚರಿಸುವನು ಬುದ್ಧನ ಮೂರ್ತಿಯ ಸಂಗಡ ಸೂರ್ಯ ಈಶ್ವರ ಈ ಮೂರ್ತಿಗಳನ್ನೂ ಮೆರೆಯಿಸುವನು ಭೇದಬುದ್ಧಿಯಿಲ್ಲದೆ ಬೌದ್ಧ ಭಿಕ್ಷುಗಳು, ಬ್ರಾಹ್ಮಣರು, ಶ್ರಮಣಕರು ಮುಂತಾದವರಿಗೆ ದಾನಗಳನ್ನು ಕೊಡುವನು ಐದು ವರ್ಷಕ್ಕೊಮ್ಮೆ ತನ್ನಲ್ಲಿದ್ದ ಸಿಲುಕನ್ನೆಲ್ಲ ದಾನಮಾಡಿ ಬಿಡುವನು. ಹೀಗೆ ಸರ್ವಸ್ವವನ್ನು ಕೊಟ್ಟಬಳಿಕ ಒಮ್ಮೆ ಹೊದ್ದುಕೊಳ್ಳಲಿಕ್ಕೆ ವಸ್ತ್ರವು ಕೂಡ ಇಲ್ಲದಾಗಲು ತನ್ನ ತಂಗಿಯಾದ ರಾಜಶ್ರೀಯಲ್ಲಿ ಒಂದು ಕಾವೆಯ ವಸ್ತ್ರವನ್ನು ಬೇಡಿಕೊಂಡನು! ಈ ರೀತಿ ನಿರ್ಧನನಾಗುವದರಲ್ಲಿ ಹರ್ಷನಿಗೆ ಒಳ್ಳೆಯ ಆನಂದವೆನಿಸುವದು. ಸ್ವಪರಾಕ್ರಮದಿಂದ ಸಾಮ್ರಾಜ್ಯ ವೈಭವವನ್ನು ಪಡೆದು ಆಳುತ್ತಿರುವಾಗ, ಉದಾರ ಮನಸ್ಸಿನಿಂದ, ಕೂಡಿದ ದ್ರವ್ಯವನ್ನೆಲ ಪ್ರಜೆಗಳಲ್ಲಿ ಸೂರೆಮಾಡುವ ಶ್ರೀಹರ್ಷನಂತಹ ರಾಜರು ಜಗ ತ್ತಿನ ಬೇರೆ ದೇಶಗಳ ಇತಿಹಾಸಗಳಲ್ಲಿ ದೊರೆಯುವರೆ?

# ೭ನೆಯ ಪಾಠ.

## ಶ್ರೀಹರ್ಷನ ಸಾಮ್ರಾಜ್ಯ. (ಮುಂದೆ ಸಾಗಿದ್ದು)



**೧. ರಾಜ್ಯಪದ್ಧತಿ:—** ಹರ್ಷನು ರಾಜ್ಯಭಾರವನ್ನು ಜಾಗ್ರತೆಯಿಂದ ಸಾಗಿಸುತ್ತಿದ್ದನು. ಬೇಟೆ, ತೀರ್ಥಯಾತ್ರೆ, ಅಧಿಕಾರಿಗಳ ಮೇಲಿನ ನಿರೀಕ್ಷಣೆ ಮುಂತಾದ ಕಾರಣಗಳಿಂದ ರಾಜ್ಯದಲ್ಲೆಲ್ಲ ತಿರುಗಾಡಿ ಎಲ್ಲ ಪರಿಸ್ಥಿತಿಯನ್ನು ಚೆನ್ನಾಗಿ ಅರಿತುಕೊಂಡಿದ್ದನು. ಮಂತ್ರಿಮಂಡಲವು ಮಹತ್ವದ ರಾಜ್ಯಕಾರ್ಯಗಳನ್ನು ವ್ಯವಸ್ಥೆಯಿಂದ ನೆರವೇರಿಸುತ್ತಿತ್ತು. ಕನೋಜದ ಬರಿದಾದ ಪಟ್ಟಕ್ಕೆ ಹರ್ಷನೇ ಯೋಗ್ಯನೆಂದು ಅಲ್ಲಿಯ ಮಂತ್ರಿಮಂಡಲದವರೇ ನಿರ್ಣಯಿಸಿದ್ದರು. ಲೆಕ್ಕ-ಪತ್ರಗಳನ್ನು ಕಾಯ್ದಿಡುವ ಸ್ವತಂತ್ರವಾದ ಒಂದು ಖಾತೆಯೇ ಏರ್ಪಡಿಸಲ್ಪಟ್ಟಿತ್ತು. ಕಾಲಾಳುಗಳು, ಸವಾರರು, ರಥಗಳು, ಆನೆಗಳು ಎಂಬ ಚದುರಂಗಗಳಿಂದ ಕೂಡಿದ ಇವನ ಸೈನ್ಯವು ರಾಜ್ಯವನ್ನು ಭದ್ರವಾಗಿ ಕಾಯುತ್ತಿತ್ತು. ಕಠಿಣವಾದ ಕಾಯಿದೆಗಳಿದ್ದರೂ ಅವುಗಳನ್ನು ಸುವಿಚಾರದಿಂದ ಉಪಯೋಗಿಸುವನು. ದಾಳಿಗಾರರ ಕಾಟವು ಮಾತ್ರ ಆಗಾಗ್ಗೆ ಆಗುತ್ತಿತ್ತೆಂದು ಬಾಣಭಟ್ಟ, ಹ್ಯೂವೆನ್‌ತ್ಸಂಗ್ ಇವರು ಬರೆದಿಟ್ಟ ವರ್ಣನೆಗಳಿಂದ ತಿಳಿಯುವದು.

**ವಿದ್ಯೆಯ ಏಳ್ಗೆ:—** ಹರ್ಷನ ಕಾಲದಲ್ಲಿ ವಿದ್ಯೆಯ ಏಳ್ಗೆ ಚೆನ್ನಾಗಿತ್ತು. ಹರ್ಷನು ಸಂಪತ್ತಿನ ನಾಲ್ಕನೆಯ ಅಂಶವನ್ನು ವಿದ್ಯಾಪ್ರಸಾರಕ್ಕಾಗಿ ವೆಚ್ಚಮಾಡುತ್ತಿದ್ದನು. ಬಹುಜನ ವಿದ್ಯಾವಂತರು ಸನ್ಯಸ್ತವೃತ್ತಿಯಿಂದ ಇದ್ದುಕೊಂಡು ಅಧ್ಯಯನ ಅಧ್ಯಾಪನಗಳಲ್ಲಿಯೆ ಕಾಲಕಳೆಯುತ್ತಿದ್ದರು. “ಐದು ಸಾವಿರ ವಿಹಾರಗಳನ್ನೂ ಅವುಗಳಲ್ಲ ವಾಸಿಸಿರುವ ಎರಡು ಲಕ್ಷಕ್ಕಿಂತ ಹೆಚ್ಚಾದ ಬೌದ್ಧ ಸಾಧುಗಳನ್ನೂ ಇನ್ನುಳಿದ ಧರ್ಮಪಂಥಗಳ ಬಹುಜನ ಸಾಧುಗಳನ್ನೂ ತಾನು ಕಂಡೆನು” ಎಂದು ಹೂವೆನ್‌ತ್ಸಂಗನು ಬರೆದಿರುವನು. **ನಾಲಂದ, ಗಯಾ, ಪ್ರಯಾಗ, ಕನೋಜ**

ಮುಂತಾದ ವಿಶ್ವವಿದ್ಯಾಲಯಗಳು ವಿದ್ಯಾರ್ಥಿಗಳಿಂದ ತುಂಬಿಕೊಂಡಿದ್ದವು. ಇವುಗಳಲ್ಲಿ ನಾಲಂದದ ಮಹಾ ವಿದ್ಯಾಲಯವು ಹೆಚ್ಚಿನದು. ಇದರ ಕಟ್ಟಡವು ಭವ್ಯವಾಗಿ ಆರು ಅಂತಸ್ತುಗಳುಳ್ಳದಾಗಿತ್ತು. ಅದು ಹತ್ತುಸಾವಿರ ವಿದ್ಯಾರ್ಥಿಗಳಿಗೆ ಸಾಲುವಷ್ಟು ದೊಡ್ಡದಿತ್ತು! ಅಧ್ಯಾಪಕರು ತಮ್ಮ ಪ್ರೌಢ ವಿದ್ಯಾರ್ಥಿಗಳಿಗೆ ಪ್ರತಿದಿನ ಸುಮಾರು ನೂರು ಬೇರೆ ಬೇರೆ ವಿಷಯಗಳ ಪಾಠಗಳನ್ನು ಹೇಳುವರು. **ವೇದವಿದ್ಯಾಮಂದಿರ, ತರ್ಕಶಾಸ್ತ್ರಮಂದಿರ, ಚಿಕಿತ್ಸಾವಿದ್ಯಾಮಂದಿರ, ನ್ಯಾಯಶಾಸ್ತ್ರಮಂದಿರ** ಮುಂತಾದ ಸ್ವತಂತ್ರವಾದ ವಿಭಾಗಗಳಲ್ಲಿ ಆಯಾ ಶಾಸ್ತ್ರಗಳ ಶಿಕ್ಷಣವು ಸಾಗುತ್ತಿತ್ತು. ವಿದ್ಯಾರ್ಥಿಗಳೂ ಅವರ ಗುರುಗಳೂ ಒಂದೆಡೆಯಲ್ಲಿ ಇದ್ದುಕೊಳ್ಳಲು ತಕ್ಕ ಅನುಕೂಲತೆಗಳೆಲ್ಲವು ಅಲ್ಲಿದ್ದವು. **ಶೀಲಭದ್ರ**ನೆಂಬವನು ಮಹಾ ವಿದ್ಯಾಲಯದ ಕುಲಗುರುವಾಗಿದ್ದನು. ಈ ಮಹಾ ವಿದ್ಯಾಲಯದ ವೆಚ್ಚಕ್ಕಾಗಿ ನೂರು ಗ್ರಾಮಗಳು ಉಂಬಳಿಯಾಗಿದ್ದವು.

ಶ್ರೀಹರ್ಷನು **ಬಾಣಭಟ್ಟ, ಹರದತ್ತ, ಜಯಸೇನ** ಮುಂತಾದ ಹೆಸರಾದ ವಿದ್ವಾಂಸರಿಗೆ ಆಶ್ರಯಕೊಟ್ಟಿದ್ದನು. ಇವನು ಸ್ವತಃ ಒಳ್ಳೆಯ ವಿದ್ವಾಂಸನಿದ್ದುದರಿಂದ ವಿದ್ಯಾವಂತರು ಇವನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದರು. ಒಮ್ಮೆ ಜಯಸೇನನ ವಿದ್ವತ್ತೆಗೆ ಮೋಹಿತನಾದ ಹರ್ಷನು ಆತನಿಗೆ ಬಿಹಾರ ಪ್ರಾಂತದ ಎಂಬತ್ತು ಗ್ರಾಮಗಳನ್ನು ಉಂಬಳಿಯಾಗಿ ಕೊಡುವ ಅಪೇಕ್ಷೆಯನ್ನು ವ್ಯಕ್ತಗೊಳಿಸಿದನು. ಆದರೆ ಆ ನಿರಪೇಕ್ಷಿಯಾದ ಪಂಡಿತನು ಆ ದಾನವನ್ನು ತೆಗೆದುಕೊಳ್ಳಲಿಲ್ಲ!

೩. **ಸಮಾಜದ ಪರಿಸ್ಥಿತಿ**:—ಆ ಕಾಲದಲ್ಲಿ ಸಹಗಮನವು ಗೌರವದ ಸಂಗತಿಯಾಗಿತ್ತು. ಬಾಲವಿವಾಹವು ರೂಢವಾಗಿತ್ತು. ಪುನರ್ವಿವಾಹವನ್ನು ಶಿಷ್ಟರು ಸಮ್ಮತಿಸುತ್ತಿರಲಿಲ್ಲ ಸ್ತ್ರೀಯರು ವಿದ್ಯಾವತಿಯರಿದ್ದರು. ಜಾತಿಭೇದಗಳು ಹೆಚ್ಚು ದೃಢವಾಗಿದ್ದವು. ಮೂರ್ತಿಪೂಜೆಯ ಪ್ರಸಾರವಾಗಿತ್ತು. ಜಾವಾ ಸುಮಾತ್ರಾ ನಡುಗಡ್ಡೆಗಳೊಡನೆ ಈ ದೇಶದ ವ್ಯಾಪಾರವು ನಡೆದಿತ್ತು. ಉಡಿಗೆ ತೊಡಿಗೆಗಳು ತೀರ ಸಾದಾತರದವಾಗಿದ್ದವು. ಶ್ರೀಮಂತರು ಜರದ ಬೆಲೆಯುಳ್ಳ ವಸ್ತ್ರಗಳನ್ನು ಉಪಯೋಗಿಸುತ್ತಿದ್ದರು.

೪. **ಹರ್ಷ ಸಾಮ್ರಾಜ್ಯದ ಅಸ್ತ** :—ಶ್ರೀಹರ್ಷನು ಹೆಸರಾದ ಸಾರ್ವಭೌಮನಾಗಿ ಆಳಿ, ಕ್ರಿ. ಶ. ೬೪೭ರಲ್ಲಿ ಮರಣಹೊಂದಿದನು. ಇವನ ತರುವಾಯ ಇವನ ರಾಜ್ಯವು ಇವನ ತಂಗಿಯ ವರ್ಮವೆಂಬ ಮನೆತನದ ಕೈಸೇರಿತು. ಈ ಮನೆತನದ **ಯಶೋವರ್ಧನ**ನು ಆಳುತ್ತಿರುವಾಗ ಕ್ರಿ. ಶ. ೬೯೬ರಲ್ಲಿ **ಕರ್ಕೋಟಕ** ಮನೆತನದ **ಲಲಿತಾದಿತ್ಯ**ನೆಂಬ ಕಾಶ್ಮೀರದ ಅರಸನು ಇವನನ್ನು ಕೊಂದು ಕನೋಜವನ್ನು ವಶಮಾಡಿಕೊಂಡನು. ಆಗ ಯಶೋವರ್ಧನನ ಆಶ್ರಯದಲ್ಲಿದ್ದ **ಭವಭೂತಿ** ಎಂಬ ಪ್ರಸಿದ್ಧ ಕವಿಯು ಕಾಶ್ಮೀರಕ್ಕೆ ಹೋಗಿ ಲಲಿತಾದಿತ್ಯನ ಆಶ್ರಯದಲ್ಲಿ ಇರಹತ್ತಿದನು.

೫. **ಕವಿಗಳೂ ನಾಟಕಕರ್ತರೂ** :— ಗುಪ್ತ ಹಾಗು ಹರ್ಷ ಸಾಮ್ರಾಜ್ಯಗಳ ಕಾಲದಲ್ಲಿ **ಮಹಾಕವಿ ಕಾಲಿದಾಸ, ಭವಭೂತಿ, ಬಾಣ, ವಿಶಾಖದತ್ತ, ದಂಡಿ, ಭಾರವಿ, ಭರ್ತೃಹರಿ, ವಿಷ್ಣುಶರ್ಮ** ಮೊದಲಾದ ವಿಖ್ಯಾತರಾದ ಸಂಸ್ಕೃತ ಕವಿಗಳೂ ನಾಟಕಕರ್ತರೂ ಆಗಿಹೋದರು. ಇವರೆಲ್ಲರಲ್ಲಿ ಕವಿಕುಲಗುರುವಾದ ಕಾಲಿದಾಸಮಹಾಕವಿಯೇ ಶ್ರೇಷ್ಠನು. ಜಗತ್ತಿನ ಮೇಲ್ತರಗತಿಯ ವಾಙ್ಮಯದಲ್ಲಿ ಕಾಲಿದಾಸನ ಗ್ರಂಥಗಳಿಗೆ ಒಳ್ಳೆಯ ಹೆಚ್ಚಿನ ಸ್ಥಾನವು ದೊರೆವುದರಲ್ಲಿ ಸಂದೇಹವಿಲ್ಲ. ಬಾಣಕವಿಯು ರಚಿಸಿದ **ಕಾದಂಬರಿ**ಯೂ **ಹರ್ಷಚರಿತ**ವೂ ಪ್ರಸಿದ್ಧವಾಗಿರುವವು. ಸಾರ್ವಭೌಮನಾದ ಶ್ರೀಹರ್ಷನು ಒಳ್ಳೆಯ ವಿದ್ವಾಂಸನಾಗಿದ್ದನಲ್ಲದೆ ಅವನು **ನಾಗಾನಂದ** ಮತ್ತು **ರತ್ನಾವಲಿ** ಎಂಬ ಎರಡು ನಾಟಕಗಳನ್ನು ಬರೆದಿರುವನು. **ದಶಕುಮಾರಚರಿತ**ದ ಕರ್ತನಾದ ದಂಡಿಯೂ **ನೀತಿ, ವೈರಾಗ್ಯ, ಶೃಂಗಾರ** ಎಂಬ ಮೂರು ಶತಕಗಳನ್ನು ಬರೆದ ಭರ್ತೃಹರಿಯೂ ಏಳನೆಯ ಶತಮಾನದಲ್ಲಿ ಆಗಿ ಹೋದರು ವಿಷ್ಣುಶರ್ಮನು **ಪಂಚತಂತ್ರ**ವನ್ನು ಬರೆದನು. ಕರುಣರಸ ಮುಖ್ಯವಾದ **ಉತ್ತರರಾಮ ಚರಿತ**ವೆಂಬ ನಾಟಕವನ್ನೂ **ಮಾಲತೀ-ಮಾಧವ** ಮತ್ತು **ಮಹಾವೀರಚರಿತಂ** ಎಂಬ ಗ್ರಂಥಗಳನ್ನೂ ಬರೆದ ಭವಭೂತಿಯು ಎಂಟನೆಯ ಶತಕದವನು.

೬. **ಶಾಸ್ತ್ರೀಯ ಗ್ರಂಥಗಳು**:— ಜ್ಯೋತಿಷ ಶಾಸ್ತ್ರದಲ್ಲಿ **ಆರ್ಯಭಟ್ಟ**ನು ಬಲ್ಲಿದವನಾಗಿದ್ದನು. ಪೃಥ್ವಿಯು ತನ್ನ ಅಚ್ಚಿನ ಸುತ್ತಲು ತಿರುಗುವ

ದೆಂದು ಇವನೇ ಮೊದಲು ಕಂಡುಹಿಡಿದನು. ಗ್ರಹಣಗಳ ನಿಜವಾದ ಕಾರಣಗಳನ್ನು ಇವನು ತನ್ನ ಗ್ರಂಥಗಳಲ್ಲಿ ಬರೆದಿರುವನು. **ಬ್ರಹ್ಮಗುಪ್ತ**ನೆಂಬ ಗಣಿತಜ್ಞನು "ವರ್ತುಲದ ಪರೀಘದಿಂದ ಮರ್ಯಾದಿತವಾದ ಚತುಷ್ಕೋಣದ ಎದುರುಬದುರಿನ ಎರಡು ಕೋಣಗಳ ಒಟ್ಟು ಎರಡು ಕಾಟಕೋಣಗಳಿಗೆ ಸರಿಯಿರುವದು" ಎಂಬ ಪ್ರಮೇಯವನ್ನು ಮೊದಲು ಕಂಡುಹಿಡಿದನು. ಅಮರಸಿಂಹನು **ಅಮರಕೋಶ**ವನ್ನೂ ವರಾಹಮಿಹಿರನು **ಬೃಹತ್ಸಂಹಿತಾ, ಪಂಚಸಿದ್ಧಾಂತಿಕಾ** ಎಂಬ ಗ್ರಂಥಗಳನ್ನೂ ರಚಿಸಿದನು. ವೈದ್ಯಶಾಸ್ತ್ರದಲ್ಲಿ ಬಲ್ಲದನೆಂದು ಹೆಸರಾದ **ಧನ್ವಂತರಿ**ಯು ವಿಕ್ರಮಾದಿತ್ಯನ ಆಶ್ರಯದಲ್ಲಿದ್ದನು.

## ೮ನೆಯ ಪಾಠ.

### ಬೌದ್ಧ ಧರ್ಮವು ಅಡಗಿ, ಹಿಂದುಧರ್ಮವು ಮರಳಿ ಉತ್ಕರ್ಷವನ್ನು ಹೊಂದಿದ್ದು.



೧. **ಧಾರ್ಮಿಕ ಪರಿಸ್ಥಿತಿ:—** ಕ್ರಿ. ಶಕಕ್ಕೆ ಮೊದಲು ೬ನೆಯ ಶತಮಾನದಲ್ಲಿ ಮಹಾತ್ಮ ಗೌತಮ ಬುದ್ಧನಿಂದ ಸ್ಥಾಪಿತವಾದ ಬೌದ್ಧಧರ್ಮವು ಕ್ರಮದಿಂದ ಹೆಚ್ಚುತ್ತ ನಡೆದಿದ್ದರೂ ಅಶೋಕನ ಕಾಲದವರೆಗೆ ಹಿಂದು ಧರ್ಮದ ವರ್ಚಸ್ಸು ಕಡಿಮೆಯಾಗಿರಲಿಲ್ಲ. ಅಶೋಕನ ದೀರ್ಘ ಪ್ರಯತ್ನದಿಂದ ಬೌದ್ಧಧರ್ಮವು ಕಳೆಕೊಂಡು, ಹಿಂದುಸ್ಥಾನದಲ್ಲಿಯೂ ಹೊರದೇಶಗಳಲ್ಲಿಯೂ ಅದು ಬಹು ದೊಡ್ಡ ಭಾಗವನ್ನು ವ್ಯಾಪಿಸಿತು. ಆಗ ಕೆಲಕಾಲ ಹಿಂದು ಧರ್ಮವು ಹಿಮ್ಮೆಟ್ಟಿದಂತಾಗಿ ಬೌದ್ಧಧರ್ಮವೇ ವರ್ಚಸ್ಸನ್ನು ಹೊಂದಿತು. ಅಶೋಕನ ತರುವಾಯ ಅವನಷ್ಟು ಮನಸ್ಸಿಟ್ಟು ಯಾರೂ ಬೌದ್ಧ ಧರ್ಮವನ್ನು ಎತ್ತಿಹಿಡಿಯಲಿಲ್ಲ. ಹಿಂದು ಧರ್ಮದ ಅಭಿಮಾನಿಗಳಾದ ಗುಪ್ತ ರಾಜರಿಂದ ಹಿಂದು ಧರ್ಮಕ್ಕೆ ಉತ್ತೇಜನವು ದೊರೆತದರಿಂದ ಕಳೆಗುಂದಿದ್ದ ಆ ಧರ್ಮವು ಮತ್ತೆ ಹೆಚ್ಚಳವನ್ನು ಪಡೆಯಹತ್ತಿತು. ಬೌದ್ಧಧರ್ಮಕ್ಕೆ

ಆಶ್ರಯವನ್ನಿತ್ತ ಕಡೆಯ ಅರಸನು ಶ್ರೀಹರ್ಷನೇ. ಅವನ ತರುವಾಯ ಎಂದರೆ ಕ್ರಿ. ಶ. ೭ನೆಯ ಶತಕದನಂತರ ಬೌದ್ಧ ಧರ್ಮಕ್ಕೆ ರಾಜಾಶ್ರಯವು ದೊರೆಯಲಿ ಇಲ್ಲ.

**೨. ಬೌದ್ಧ ಧರ್ಮದಲ್ಲುಂಟಾದ ದೋಷಗಳು** — ಕ್ರಿ. ಶ. ೭ನೆಯ ಶತಕದ ಸುಮಾರಿಗೆ ಬೌದ್ಧಧರ್ಮಿಗಳಲ್ಲಿಯೂ ಕೆಲವು ದೋಷಗಳುಂಟಾದವು. ಠೊಕ್ಕಸ್ತರಾದ ಬೌದ್ಧ ಭಿಕ್ಷುಗಳು ನೀತಿತಪ್ಪಿ ನಡೆಯಹತ್ತಿದರು. ಭಿಕ್ಷುಗಳ ಸಂಖ್ಯೆಯು ಹೆಚ್ಚಾಗಿ ಅವರನ್ನು ಪೋಷಿಸುವ ಭಾರವು ಸಮಾಜದ ಮೇಲೆ ಹೆಚ್ಚಿದ್ದರಿಂದ ರಾಷ್ಟ್ರದ ಸಂಪತ್ತಿಯು ದುರುಪಯೋಗವಾಗಹತ್ತಿತು. ಅಹಿಂಸೆಯು *ಅತಿರೇಕವಾದದರಿಂದ ಸ್ವಸಂರಕ್ಷಣೆಗೆ ಅವಶ್ಯವಾದ ಕ್ಷಾತ್ರವೃತ್ತಿಯು ಕಡಿಮೆಯಾಗಹತ್ತಿತು. ವೇದಪ್ರಾಮಾಣ್ಯ ವರ್ಣಾಶ್ರಮ ಇವುಗಳನ್ನು ಪ್ರೀತಿಸುವ ಹಿಂದು ಧರ್ಮಾಭಿಮಾನಿಗಳು ಬೌದ್ಧಧರ್ಮಿಗಳಲ್ಲಿಯ ಈ ದೋಷಗಳನ್ನೆತ್ತಿ ಅದನ್ನು ಖಂಡಿಸಹತ್ತಿದರು.

**೩. ಕುಮಾರಿಲಭಟ್ಟರು:**— ಮೇಲೆ ವಿವರಿಸಿದಂತೆ ಬೌದ್ಧ ಧರ್ಮದ ಸ್ಥಿತಿಯಿರುವಾಗ **ಆಸಾಮ ಪ್ರಾಂತದ** ವಿದ್ವಾಂಸರ ಒಂದು ಮನೆತನದಲ್ಲಿ ಜನ್ಮಿಸಿದ **ಕುಮಾರಿಲಭಟ್ಟ**ರೆಂಬವರು ಹರ್ಷನ ತರುವಾಯ ತುಸು ದಿವಸಗಳಲ್ಲಿ ಪ್ರಸಿದ್ಧಿಗೆ ಬಂದರು. ಇವರು ವಿದ್ವಾಂಸರಾಗಿದ್ದು ಬೌದ್ಧ ಭಿಕ್ಷುಗಳಿಂದ ಆ ಧರ್ಮತತ್ವಗಳನ್ನು ಚೆನ್ನಾಗಿ ಮನನಮಾಡಿಕೊಂಡು, ಹಿಂದುಧರ್ಮದ ಪುನರುಜ್ಜೀವನದ ಕಾರ್ಯವನ್ನು ಕೈಕೊಂಡರು. ಮತ್ತು ಬೌದ್ಧ ಮತವನ್ನು ಖಂಡಿಸಿ, ವೇದಗಳ ವಿಷಯವಾಗಿ ಅನಾದರ ಬುದ್ಧಿಯನ್ನು ತೋರಿಸುವದು ಯೋಗ್ಯವಲ್ಲೆಂಬದನ್ನು ಜನರ ಮನಸ್ಸಿನಲ್ಲಿ ಬಿಂಬಿಸಿದರು. ಇದರಿಂದ ವೇದಗಳಿಗೆ ಮೊದಲಿನ ಗೌರವವು ಉಂಟಾಯಿತು. ಅಗ್ನಿಹೋತ್ರವೂ ಯಜ್ಞಾದಿ ಕರ್ಮಗಳೂ ಅವಶ್ಯವಾದವುಗಳೆಂದು ಇವರು ಪ್ರತಿಪಾದಿಸಿದರು. ಸನ್ಯಾಸ ಮಾರ್ಗವಂತೂ ಇವರಿಗೆ ಎಷ್ಟೂ ಸಮ್ಮತವಿರಲಿಲ್ಲ. ಆದರೆ ಬೌದ್ಧಧರ್ಮದ

---

* ಮಹಮ್ಮದ ಕಾಶೀಮನು ದಂಡೆತ್ತಿ ಬಂದಾಗ ಬೌದ್ಧಧರ್ಮಿಗಳಾದ ವೈಶ್ಯರು ತಾವಾಗಿ- ಶರಣುಹೋದ ಸಂಗತಿಯು ಅಹಿಂಸಾತತ್ವದ ಅತಿರೇಕದ ಸಾಕ್ಷಿಯಾಗಿದೆ.

ಅಹಿಂಸೆ ಮತ್ತು ಸಂನ್ಯಾಸ ಇವು ಲೋಕಪ್ರಿಯವಾಗಿದ್ದದರಿಂದ ಈ ತತ್ತ್ವಗಳನ್ನು ಖಂಡಿಸುವದೂ ಯಜ್ಞಯಾಗಾದಿಗಳನ್ನು ಮರಳಿ ರೂಢಿಯಲ್ಲಿ ತರುವದೂ ಮಾತ್ರ ಸಾಧ್ಯವಾಗಲಿಲ್ಲ.

**೪. ಶಂಕರಾಚಾರ್ಯರು :—** ಅಸಾಮಾನ್ಯ ಬುದ್ಧಿಶಾಲಿಗಳಾದ ಈ ಪುರುಷರು **ಕೇರಳ** (ಮಲಬಾರ) ಪ್ರಾಂತದ **ನಂಬುದ್ರಿ** ಎಂಬ



**ಆದ್ಯ ಶಂಕರಾಚಾರ್ಯರು**

ಬ್ರಾಹ್ಮಣ ಕುಲದಲ್ಲಿ ಕ್ರಿ. ಶ. ೭೮೮ರಲ್ಲಿ ಜನಿಸಿದರು. ಚಿಕ್ಕವರಿರುವಾಗಲೆ ಇವರ ಹಿರಿಯರು ತೀರಿಕೊಂಡರು. ಅಲ್ಪ ಕಾಲದಲ್ಲಿಯೆ ಇವರು ವಿದ್ಯಾಭ್ಯಾಸವನ್ನು ಮುಗಿಸಿದರು. ಮನೆಯಲ್ಲಿ ಇವರ ಲಗ್ನದ ವಿಚಾರವು ನಡೆಯಲು ಅದಕ್ಕೆ ಒಪ್ಪಿಕೊಳ್ಳದೆ ಉಪಾಯದಿಂದ ತಾಯಿಯವರ ಅಪ್ಪಣೆ

ಯನ್ನು ದೊರೆಯಿಸಿಕೊಂಡು **ಕಾಶಿಗೆ** ಹೊರಟರು. ವಿಂಧ್ಯಾಂದ್ರಿಯ ನೆರೆಯ ಪ್ರದೇಶದಲ್ಲಿಗೆ **ಗೋವಿಂದಪಾದಾಚಾರ್ಯ**ರೆಂಬ ಸತ್ಪುರುಷರ ದರ್ಶನ ವಾಯಿತು. ಅವರಿಂದ ಉಪದೇಶದೊಂದಿಗೆ ಸಂನ್ಯಾಸ ದೀಕ್ಷೆಯನ್ನು ಹೊಂದಿದರು. ಬಳಿಕ ಕಾಶಿಗೆ ಹೋಗಿ ಧರ್ಮ ಮತ್ತು ತತ್ವಜ್ಞಾನ ಈ ವಿಷಯಗಳ ಚರ್ಚೆಯಲ್ಲಿ ಅಲ್ಲಿಯ ಪಂಡಿತರನ್ನೇ ಜಯಿಸಿ ತಮ್ಮ ಮತವನ್ನು ಪ್ರಸ್ಥಾಪಿಸಿದರು. * **ಪ್ರಸ್ಥಾನತ್ರಯಿಯ** ಮೇಲೆ ಇವರು ಬರೆದ ಟೀಕೆಗಳು "**ಶಾಂಕರಭಾಷ್ಯ**" ಎಂಬ ಹೆಸರಿನಿಂದ ಪ್ರಸಿದ್ಧವೆನಿಸಿರುವವು. ಗ್ರಂಥ ರಚನೆಯ ಕೆಲಸವು ಮುಗಿದ ಬಳಿಕ ಇವರು ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿ ಸಂಚಾರಮಾಡಿದರು. ಅಲ್ಲಲ್ಲಿ ಒದಗಿದ ಚರ್ಚೆಯ ಪ್ರಸಂಗಗಳಲ್ಲಿ ಪಂಡಿತರಿಂದ ತಮ್ಮ ಮತಕ್ಕೆ ಒಪ್ಪಿಗೆಯನ್ನು ಪಡೆಯುತ್ತ ಕುಮಾರಿಲ ಭಟ್ಟರು ಆರಂಭಿಸಿದ್ದ ಹಿಂದುಧರ್ಮದ ಪುನರುಜ್ಜೀವನದ ಕಾರ್ಯವನ್ನು ಹೆಚ್ಚು ಚಾತುರ್ಯದಿಂದ ನಡೆಯಿಸಿದರು. ಬೌದ್ಧಧರ್ಮದ ಸಂನ್ಯಾಸ ಮತ್ತು ಅಹಿಂಸೆ ಎಂಬ ತತ್ವಗಳು ಬಹು ಜನರಿಗೆ ಪ್ರಿಯವಾಗಿದ್ದವು. ಇವುಗಳಿಗೆ ಒಪ್ಪಿಗೆಯನ್ನಿತ್ತು ವೇದ ಮತ್ತು ವರ್ಣಾಶ್ರಮ ಇವುಗಳ ಮಹತ್ವವನ್ನು ಜನರು ಒಪ್ಪುವಂತೆ ಉಪದೇಶಿಸಿದರು. ಇವರ ಉಪದೇಶದಿಂದ ಬೌದ್ಧರೆಲ್ಲ ಹಿಂದುಗಳಾದರು. ಬೌದ್ಧಧರ್ಮದ ಅನುಯಾಯಿಯು ಈ ದೇಶದಲ್ಲಿ ಒಬ್ಬನೂ ಉಳಿಯಲಿಲ್ಲ. ಹಿಂದು ಧರ್ಮವು ಭರದಿಂದ ಉತ್ಕರ್ಷವನ್ನು ಹೊಂದಹತ್ತಿತು. ಧರ್ಮಜಾಗ್ರತೆಯ ಕಾರ್ಯವು ಅಖಂಡವಾಗಿ ನಡೆಯಲೆಂದು ಇವರು ದೇಶದ ನಾಲ್ಕೂ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಇವುಗಳಲ್ಲಿ †**ಶೃಂಗೇರಿಯ** ಮಠವು ಮುಖ್ಯವು. ಈ ರೀತಿ ಅಲೌಕಿಕವಾದ ಕಾರ್ಯವನ್ನು ನೆರವೇರಿಸಿ **ಜಗದ್ಗುರು**ಗಳೆನಿಸಿಕೊಂಡರು. ಮತ್ತು ವಯಸ್ಸಿನ **೩೨ ನೆಯ ವರ್ಷ** ಹಿಮಾಲಯದಲ್ಲಿಯ ಬದರೀಕೇದಾರದ

---

* ಉಪನಿಷತ್ತುಗಳು ಭಗವದ್ಗೀತೆ ಮತ್ತು ವೇದಾಂತ ಸೂತ್ರಗಳಿಗೆ 'ಪ್ರಸ್ಥಾನತ್ರಯಿ' ಎಂಬ ಹೆಸರು.

† ದಕ್ಷಿಣದಲ್ಲಿ ಶೃಂಗೇರಿ, ಉತ್ತರದಲ್ಲಿ ಬದರಿಕೇದಾರ, ಪಶ್ಚಿಮದಲ್ಲಿ ದ್ವಾರಕೆ, ಪೂರ್ವದಲ್ಲಿ ಜಗನ್ನಾಥಪುರಿ ಎಂಬ ನಾಲ್ಕು ಸ್ಥಳಗಳಲ್ಲಿ ನಾಲ್ಕು ಮುಖ್ಯ ಮಠಗಳು ಸ್ಥಾಪಿಸಲ್ಪಟ್ಟವು.

ಕಡೆಗೆ ಹೋದವರು ಮರಳಿ ಬರಲಿಲ್ಲ! ಇವರ ಅಸಾಧಾರಣ ಮೇಧಾಶಕ್ತಿ, ದೀರ್ಘೋದ್ಯೋಗ, ಸಾಹಸ, ಕಾರ್ಯಗಳನ್ನು ನಿರ್ವಹಿಸುವ ಶಕ್ತಿ, ವ್ಯವಹಾರ ಕುಶಲತೆ ಈ ಗುಣಗಳು ಅತ್ಯಲ್ಪ ಕಾಲದಲ್ಲಿ ಪ್ರಚಂಡ ಕಾರ್ಯಗಳನ್ನು ನೆರವೇರಿಸಲು ಕಾರಣಗಳಾದವು.

**೫. ಬೌದ್ಧ ಧರ್ಮದ ಸಂಸರ್ಗದಿಂದ ಹಿಂದು ಧರ್ಮದ ಮೇಲೆ ಆದ ಪರಿಣಾಮ :—** ಹಿಂದುಸ್ಥಾನದಲ್ಲಿ ಬೌದ್ಧಧರ್ಮವು ಇಲ್ಲದಂತಾದರೂ ಅದರ ಸ್ಥಿರವಾದ ಪರಿಣಾಮವು ಹಿಂದುಧರ್ಮದ ಮೇಲೆ ಆಗದೆ ಇರಲಿಲ್ಲ. ಆ ಪರಿಣಾಮಗಳು ಯಾವವೆಂದರೆ:— ೧. ಅಹಿಂಸಾ ತತ್ವದ ವಿಜಯದ ಮೂಲಕ ಹಿಂಸಾಯುಕ್ತವಾದ ಯಜ್ಞವಿಧಿಗಳು ನಿಂತುಹೋದವು. ೨. ಹಿಂದುಗಳು ಬುದ್ಧನ ಮೂರ್ತಿಗಳಂತೆ ದೇವತೆಗಳ ಮೂರ್ತಿಗಳನ್ನು ಸ್ಥಾಪಿಸಿ ಅವನ್ನು ಪೂಜಿಸಹತ್ತಿದರು. ೩. ಬುದ್ಧ, ಧರ್ಮ, ಸಂಘ ಈ ತ್ರಯಿಯಂತೆ ಬ್ರಹ್ಮ-ವಿಷ್ಣು-ಮಹೇಶರೆಂಬ ತ್ರಿಮೂರ್ತಿಗಳ ಉಪಾಸನೆಗೆ ಆರಂಭವಾಯಿತು. ೪. ಜನಸಾಮಾನ್ಯರಿಗೆ ಸುಲಭವಾದ ಭಕ್ತಿಮಾರ್ಗದ ಉದಯವಾಯಿತು. ೫. ಸಂನ್ಯಾಸಮಾರ್ಗಕ್ಕೆ ಹೆಚ್ಚು ಮಹತ್ವವುಂಟಾಯಿತು.

---

## ೯ನೆಯ ಪಾಠ.

### ರಜಪೂತರ ಕಾಲ.

(ಕ್ರಿ. ಶ. ೬೪೭ — ಕ್ರಿ. ಶ. ೧೧೯೯)



**೧. ಹರ್ಷನ ತರುವಾಯದ ಕಾಲಸ್ಥಿತಿ :—** ಹರ್ಷನ ಸಾಮ್ರಾಜ್ಯದ ತರುವಾಯ **ರಜಪೂತ** ಅಥವಾ **ರಾಜಪುತ್ರರು** ಪ್ರಬಲರಾಗಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿದರು. ಕುಮಾರಿಲಭಟ್ಟರೂ ಶಂಕರಾಚಾರ್ಯರೂ ಪ್ರಚಂಡವಾದ ಚಳವಳಿಯನ್ನು ಮಾಡಿ, ಹೊಸ ಸ್ವರೂಪದಲ್ಲಿ ವೈದಿಕಧರ್ಮವನ್ನು ಮರಳಿ ಸ್ಥಾಪಿಸಿದ ಬಳಿಕ, ಅದರ ಸಂರಕ್ಷಣೆಯ ಕಾರ್ಯವನ್ನು ಎಂಟನೆಯ ಶತಕದಿಂದ ಹದಿನೇಳನೆಯ ಶತಕದ ವರೆಗೆ

ಈ ರಜಪೂತ ಅರಸರೇ ಮಾಡಿದರು. ಅಪರಿಮಿತವಾದ ಕಷ್ಟನಷ್ಟಗಳನ್ನು ಸಹಿಸಿಯೂ ಅಸಂಖ್ಯ ಪ್ರಾಣಗಳನ್ನು ನೀಡಿಯೂ ಈ ವೀರರು ಧರ್ಮವನ್ನುಳಿಸಿಕೊಳ್ಳಲು ಒಂದೇಸವನೆ ಸಾಹಸಬಟ್ಟರು. ಸ್ಥಿರವಾದ ಜಯವೂ ಸ್ವಾತಂತ್ರ್ಯವೂ ಸಿಗದೆಯಿದ್ದರೂ ಇವರು ಮಾಡಿದ ಬಲವಾದ ತಡೆಯಿಂದ, ಹಿಂದುಧರ್ಮವು ಈಗಿರುವಷ್ಟಾದರೂ ಉಳಿದುಕೊಂಡಿದೆಯೆಂದು ಹೇಳಬಹುದು. ಕ್ರಿ. ಶ. ೬ನೆಯ ಶತಕದಲ್ಲಿ **ಅರಬಸ್ತಾನದಲ್ಲಿ ಮುಸಲ್ಮಾನೀ** ಧರ್ಮವು ಸ್ಥಾಪಿತವಾಯಿತು. ಈ ಮುಸಲ್ಮಾನರು ತಮ್ಮ ಧರ್ಮಸಂಸ್ಕೃತಿಗಳೊಂದಿಗೆ ಪರಾಕ್ರಮದಿಂದ ಒಂದರಹಿಂದೊಂದು ದೇಶಗಳನ್ನು ಗೆಲಿದು ಅವನ್ನೆಲ್ಲ ಸಂಪೂರ್ಣವಾಗಿ ಮುಸಲ್ಮಾನ ಧರ್ಮಕ್ಕೆ ಕೂಡಿಸಿಕೊಂಡುದನ್ನು ವಿಚಾರಿಸಿದರೆ, ಹಿಂದುಧರ್ಮವು ಮುಸಲ್ಮಾನರ ಅಬ್ಬರದ ಆಳಿಕೆಯ ತರುವಾಯವೂ ಉಳಿದಿರುವದು ಆಶ್ಚರ್ಯದ ಸಂಗತಿಯೆನಿಸುವದು. ಈ ರೀತಿಯಾಗಿ ಹಿಂದುಧರ್ಮವು ಸ್ಥಿರವಾಗಿ ಉಳಿಯಲು, ಹಿಂದು ಸಂಸ್ಕೃತಿಯು ಮಹತ್ವವೂ ರಜಪುತರ ಧರ್ಮಾಭಿಮಾನ-ಶೌರ್ಯ-ಸಾಹಸಗಳೂ ಕಾರಣವಾದವೆಂದು ನಿಸ್ಸಂಶಯವಾಗಿ ಹೇಳಬಹುದು.

೨. **ರಜಪುತರ ಉದಯ :—** ರಜಪುತರು * ಪ್ರಾಚೀನ ಕ್ಷತ್ರಿಯ ರಾಜರ ವಂಶದವರು. ಬೌದ್ಧಧರ್ಮವು ಒತ್ತರದಿಂದ ಹಬ್ಬುತ್ತಿರುವಾಗ ಬಹುಜನರು ಆ ಧರ್ಮವನ್ನು ಸ್ವೀಕರಿಸಿದರು. ಇದರಿಂದ ವರ್ಣಗಳ ಸಂಕರವಾಗಹತ್ತಿತು. ತಮ್ಮ ಪ್ರಾಚೀನ ಪರಂಪರೆಯನ್ನು ಕಾಯ್ದುಕೊಳ್ಳುವ ಮನಸ್ಸುಳ್ಳವರಿಗೆ ಈ ವರ್ಣಸಂಕರವು ಸರಿಬರಲಿಲ್ಲ. ಇಂಥ ಕೆಲ ಕ್ಷತ್ರಿಯ ಮನೆತನದವರು ಸಂಕರಹೊಂದಿದವರಿಂದ ಅಗಲಿಹೋಗಿ ಅರವಲಿ–ವಿಂಧ್ಯಗಳ ಮಧ್ಯಪ್ರದೇಶವನ್ನು ಆಶ್ರಯಿಸಿದರು. ಇವರೇ, ಮುಂದೆ ಶುದ್ಧ ಕ್ಷತ್ರಿಯರೆಂಬುದನ್ನು ಸೂಚಿಸುವ ರಾಜಪುತ್ರ ಅಥವಾ ರಜಪುತ ಎಂಬ ಹೆಸರನ್ನು ಪಡೆದರು.

* ರಜಪೂತರು ತಾವು ಸೂರ್ಯ ಅಥವಾ ಚಂದ್ರವಂಶಜರೆಂದು ನಂಬುತ್ತಿದ್ದರೆಂದೂ ತಮ್ಮ ಪರಂಪರೆಯನ್ನು ರಾಮ-ಕೃಷ್ಣರವರೆಗೆ ನಿಲುಕಿಸುತ್ತಿದ್ದರೆಂದೂ ೯ನೆಯ, ೧೦ನೆಯ ಶತಮಾನಗಳ ಶಿಲಾಲೇಖಗಳಿಂದ ತಿಳಿಯುವದು.

ರಜಪುತರು ಒಳ್ಳೆಯ ಶೂರರೂ ಉದಾರರೂ ವಚನಪಾಲಿಸುವವರೂ ಆಗಿದ್ದರು. ಯುದ್ಧದಲ್ಲಿ ಒಂದುವೇಳೆ ಸಾವು ಬಂದರೆ ಮೋಕ್ಷವು ಉಂಟಾಗುವದೆಂದು ಇವರ ನಂಬುಗೆ. ಬಹುತರ ಎಲ್ಲ ರಜಪುತರು ಶಿವಭಕ್ತರು. ರಜಪುತ ಸ್ತ್ರೀಯರಾದರೂ ಶೂರರೇ. ಶತೃಗಳಿಗೆ ಬೆನ್ನು ತೋರಿಸಿ ಬಂದವರನ್ನು ಮರಳಿ ಯುದ್ಧಕ್ಕೆ ಕಳುಹುವರು. ಅನೇಕ ಸ್ತ್ರೀಯರು ಪರಾಕ್ರಮದಿಂದ ಶತೃಗಳೊಡನೆ ಕಾದಿರುವರು. ಶತೃಗಳ ಕೈಗೆ ಸಿಗುವ ಪ್ರಸಂಗವು ಒದಗಲು, ದುರ್ದಶೆಯನ್ನು ತಪ್ಪಿಸುವದಕ್ಕಾಗಿ **ಜೋಹರ**ವನ್ನು ಮಾಡಿ ತಮ್ಮ ದೇಹಗಳನ್ನು ಅಗ್ನಿಗೆ ಅರ್ಪಿಸುತ್ತಿದ್ದರು.

**೩. ಉತ್ತರ ಹಿಂದುಸ್ಥಾನದಲ್ಲಿಯ ರಜಪೂತರ ರಾಜ್ಯಗಳು:—**
(ಅ) **ಕನೋಜದ ಪ್ರತಿಹಾರರು :—** ಈ ಮನೆತನದ **ನಾಗಭಟ**ನೆಂಬವನು ಕ್ರಿ. ಶ. ೮೧೬ರಿಂದ ಕನೋಜದಲ್ಲಿ ರಾಜ್ಯವಾಳಹತ್ತಿದನು. ಇವನು ಕ್ರಿ. ಶ. ೮೩೪ರಲ್ಲಿ ಮರಣಹೊಂದಿದನು. ಮುಂದೆ ಹದಿನೈದು ವರ್ಷಗಳ ತರುವಾಯ ಈ ವಂಶದ **ಮಿಹಿರ** ಅಥವಾ **ಭೋಜನು** ಆಳುತ್ತಿರುವಾಗ ಪ್ರತಿಹಾರರ ಸಾಮ್ರಾಜ್ಯವು ಪಶ್ಚಿಮ ಸಮುದ್ರದಿಂದ ಪೂರ್ವ ಸಮುದ್ರದವರೆಗೆ ಪ್ರಸರಿಸಿತ್ತು. ಈ ಭೋಜನು ಬಂಗಾಲದ ಅರಸನನ್ನು ಸೋಲಿಸಿದನು. ಆದರೆ ದಕ್ಷಿಣದಲ್ಲಿ ಪ್ರಬಲರಾಗಿದ್ದ **ರಾಷ್ಟ್ರಕೂಟರ** ಮುಂದೆ ಇವನ ಆಟವು ಸಾಗಲಿಲ್ಲ. ಕ್ರಿ. ಶ. ೮೯೦ರಲ್ಲಿ ಭೋಜನು ಮರಣಹೊಂದಿದನು. ಮುಂದೆ ಕ್ರಿ. ಶ. ೯೧೬ರಲ್ಲಿ ರಾಷ್ಟ್ರಕೂಟರ **ಇಂದ್ರ**ನೆಂಬ ಅರಸನು ಕನೋಜದವರನ್ನು ಪೂರ್ಣವಾಗಿ ಸೋಲಿಸಿದನು. ಕ್ರಿ. ಶ. ೧೦೨೦ರ ವರೆಗೆ ಕನೋಜದಲ್ಲಿ ಈ ಮನೆತನದ ಅನೇಕ ಅರಸರು ಆಳಿದರು. ಕ್ರಿ. ಶ. ೧೦ನೆಯ ಶತಕದ ಆರಂಭದಿಂದ ಮುಸಲ್ಮಾನರ ದಾಳಿಗಳು ಬರಹತ್ತಿದವು. ಇವುಗಳ ಸಂಬಂಧದ ತಿಳಿವು ಮುಂದೆ ವಿವರಿಸಲ್ಪಟ್ಟಿದೆ.

(ಆ) **ಧಾರದ ಪರಮಾರರು :—** ಈ ಮನೆತನದ **ಕೃಷ್ಣರಾಜ**ನೆಂಬವನು ಕನೋಜದ ಅಧಿಕಾರವನ್ನು ಕಿತ್ತೊಗೆದು ಕ್ರಿ.ಶ. ೯೧೪ರಿಂದ ಸ್ವತಂತ್ರನಾಗಿ ಆಳಹತ್ತಿದನು. ಮುಂದೆ ಕ್ರಿ. ಶ. ೧೦೧೮ರಿಂದ ೧೦೬೦ರ ವರೆಗೆ ಆಳಿದ **ಭೋಜರಾಜ**ನು ಸ್ವತಃ ವಿದ್ವಾಂಸನಾಗಿದ್ದು ಅನೇಕ ವಿದ್ವಾಂಸರಿಗೆ ಆಶ್ರಯ

ವನ್ನು ಕೊಟ್ಟನು. ರಾಜಧಾನಿಯಾದ **ಧಾರಾ** ನಗರದಲ್ಲಿ ಒಂದು ವಿಶ್ವ ವಿದ್ಯಾಲಯವನ್ನು ಸ್ಥಾಪಿಸಿದನು. ಕ್ರಿ. ಶ. ೧೦೬೦ ರ ಬಳಿಕ ಗುಜರಾಥ, ಮಧ್ಯಪ್ರಾಂತಗಳ ಅರಸರು ಈ ಪರಮಾರರನ್ನು ಸೋಲಿಸಿದ್ದರಿಂದ ಇವರ ರಾಜ್ಯವು ಬಲಗುಂದಿತು.

(ಇ) **ಚಂದೆಲ್ಲರು** :— ಬುಂದೇಲ ಖಂಡದ ಈ ರಜಪುತ ರಾಜರು ೯ನೆಯ ಶತಕದಲ್ಲಿ ಸ್ವತಂತ್ರರಾಗಿ ಆಳಹತ್ತಿದರು. ಇವರು ಕನೋಜದ ರಾಜರಿಗೆ ಪರಿಚಕ್ರಗಳೊಡನೆ ಕಾದುವ ಕೆಲಸದಲ್ಲಿ ಸಹಾಯಕರಾಗಿದ್ದರು ಚವ್ಹಾಣರ **ಪೃಥ್ವಿರಾಜನೂ** ಆ ಬಳಿಕ ಮುಸಲ್ಮಾನರೂ ಎಷ್ಟೋ ಸಾರೆ ಬುಂದೇಲಖಂಡದ ಮೇಲೆ ಸಾಗಿಬಂದರೂ ಚಂದೆಲ್ಲರು ತಮ್ಮ ಸ್ವಾತಂತ್ರ್ಯ ವನ್ನು ರಕ್ಷಿಸಿಕೊಂಡಿದ್ದರು.

(ಈ) **ಪಾಲರು** :— ಕ್ರಿ. ಶ. ೭೫೦ರಿಂದ ಪಾಲರು ಬಂಗಾಲವನ್ನು ಆಳಹತ್ತಿದರು. ಕೆಲಕಾಲ ಇವರು ಪ್ರಬಲರಾಗಿ ಸಾಮ್ರಾಜ್ಯವನ್ನು ಆಳಿ ದರು. ಬಂಗಾಲದ ಮೇಲೆ ಇವರ ಅಧಿಕಾರವು ೧೨ನೆಯ ಶತಮಾನದ ಕಡೆಯ ವರೆಗೆ ನಡೆದಿತ್ತು.

(ಉ) **ಮೇವಾಡದ ಗುಹಿಲೋತರು** :— ಈ ಮನೆತನವು ಎಲ್ಲ ರಜಪುತರ ಮನೆಗಳಲ್ಲಿ ಶ್ರೇಷ್ಠವೆನಿಸುವದು. ಈ ಅರಸರು ತಾವು ಶ್ರೀ ರಾಮಚಂದ್ರನ ವಂಶಜರೆಂದು ಹೇಳುವರು. **ಬಾಪ್ಪಾರಾವಳನು** ಈ ಮನೆ ತನದ ಮೂಲ ಪುರುಷನು. ಕ್ರಿ. ಶ. ೭೬೩ರಲ್ಲಿ ಇವನು ಮರಣ ಹೊಂದಿ ದನು. ಇವನ ಮಗನಾದ **ಗುಹಿಲೋತನು** ಬಹು ಪರಾಕ್ರಮಿಯಾದದ ರಿಂದ ಈ ಮನೆತನಕ್ಕೆ 'ಗುಹಿಲೋತ' ಎಂಬ ಹೆಸರುಂಟಾಯಿತು. ಮುಂದೆ ಈ ಮನೆತನದಲ್ಲಿ **ರಾಣಾ ಭೀಮದೇವ, ಸಂಗರಾಜ, ಪ್ರತಾಪಸಿಂಹ** ಎಂಬ ಕೆಚ್ಚೆದೆಯ ವೀರರು ಹೆಸರಾದರು.

(ಊ) ಇವರ ಹೊರತು ದಿಲ್ಲಿಯಲ್ಲಿ **ತೋಮರರು**, ಗುಜರಾಥದಲ್ಲಿ **ಚಾಲುಕ್ಯರು**, ಅಜಮೀರದಲ್ಲಿ **ಚವ್ಹಾಣರು**, ಚೇದಿಯಲ್ಲಿ **ಕಲಚೂರ್ಯರು** ಮುಂತಾದ ರಜಪುತರು ಆಳುತ್ತಿದ್ದರು.

**೪. ಉಳಿದ ಅರಸು ಮನೆತನಗಳು:— (ಅ) ಸಿಂಧದ ರಾಜ್ಯ:—** ಸಿಂಧ ಪ್ರಾಂತದಲ್ಲಿ **ಸಾಹಸೀ** ಎಂಬ ಶೂದ್ರ ರಾಜನು ಕ್ರಿ. ಶ. ೬೩೧ ರಲ್ಲಿ ಆಳಲಾರಂಭಿಸಿದನು. ಆತನ ರಾಜಧಾನಿಯು **ಆಲೋರ** ಎಂಬದಿತ್ತು. ಇವನು ಕ್ರಿ. ಶ. ೬೫೦ ರಲ್ಲಿ ಸಾಯಲು **ಚಚ**ನೆಂಬ ಬ್ರಾಹ್ಮಣ ಮಂತ್ರಿಯು ತಾನೇ ಅರಸನಾದನು. ಚಚನ ತರುವಾಯ ಅವನ ತಮ್ಮನಾದ ಚಂದ್ರನು




ರಜಪುತರ ರಾಜ್ಯಗಳು

ಕೆಲದಿನ ಆಳಿ, ಚಚನ ಮಗನಾದ **ದಾಹಿರ**ನು ಪ್ರಬುದ್ಧನಾವದರಿಂದ ಅವನಿಗೆ ರಾಜ್ಯವನ್ನೊಪ್ಪಿಸಿದನು. ಈ ದಾಹಿರನ ಆಳಿಕೆಯಲ್ಲಿ **ಮಹಮ್ಮದ ಬಿನ್ ಕಾಶೀಮ**ನೆಂಬ ಅರಬರ ಶೂರ ಸರದಾರನು ದಾಹಿರನನ್ನು ಕೊಂದು ಸಿಂಧಪ್ರಾಂತವನ್ನು ವಶಪಡಿಸಿಕೊಂಡನು. ಕ್ರಿ. ಶ. ೭೧೨.

**(ಆ) ಒಡಿಸಾದ ಮನೆತನಗಳು :— ಯಯಾತಿ ಕೇಸರಿ** ಎಂಬವನು ಕ್ರಿ. ಶ. ೪೭೯ರಲ್ಲಿ ತನ್ನ ರಾಜ್ಯವನ್ನು ಒಡಿಸಾದಲ್ಲಿ ಸ್ಥಾಪಿಸಿದನು. ಇವನ ರಾಜಧಾನಿಯು **ಭುವನೇಶ್ವರ** ಎಂಬದು. ಶಿವಭಕ್ತನಾದ ಇವನು ಅನೇಕ ಸುಂದರವಾದ ಶಿವಾಲಯಗಳನ್ನು ಕಟ್ಟಿಸಿದನು. ಈ ವಂಶದ **ನೃಪಕೇಸರಿ** ಎಂಬವನು **ಕಟಕಪಟ್ಟಣ**ವನ್ನು ನೆಲೆಸಿದನು. ಈ ಮನೆತನವು ಕ್ರಿ. ಶ. ೧೨ನೆಯ ಶತಕದ ವರೆಗೆ ನಡೆಯಿತು.

ಬಳಿಕ, ೧೧೩೨ರಲ್ಲಿ ಗಂಗಮನೆತನದ **ಚೋರಗಂಗ**ನು ತನ್ನ ಮನೆತನವನ್ನು ನಡೆಯಿಸಿದನು. ಈ ಗಂಗರು ವಿಷ್ಣುಭಕ್ತರು ಶೈವ, ವೈಷ್ಣವ ಸಂಘಗಳೆರಡೂ ಒಡಿಸಾದಲ್ಲಿ ಬಹುಕಾಲ ನಡೆದವು. ಈ ಭಾಗದ ಬೌದ್ಧರೆಲ್ಲ ವೈಷ್ಣವ ಪಂಥವನ್ನು ಸೇರಿದರು. ೧೨ನೆಯ ಶತಕದಲ್ಲಿ **ಅನಂತಭೀಮ**ನು **ಪುರಿ**ಯಲ್ಲಿ **ಜಗನ್ನಾಥ**ನ ಮಂದಿರವನ್ನು ಕಟ್ಟಿಸಿದನು. ಮುಂದೆ ೧೫ನೆಯ ಶತಮಾನದಲ್ಲಿ **ಪುರುಷೋತ್ತಮ**ನೆಂಬವನು ತನ್ನ ರಾಜ್ಯವನ್ನು ದಕ್ಷಿಣಕ್ಕೆ ಬೆಳೆಸಿ ಕಂಚಿಯ ರಾಜಕನ್ಯೆಯನ್ನು ಲಗ್ನವಾದನು. ಕ್ರಿ. ಶ. ೧೫೩೪ ರಲ್ಲಿ ಈ ಮನೆತನವು ಮುಗಿಯಿತು.

**೫. ರಜಪುತರ ಕಾಲದ ಧರ್ಮೋನ್ನತಿ :—** ರಜಪುತರ ರಾಜರೆಲ್ಲರು ಹಿಂದುಧರ್ಮಾಭಿಮಾನಿಗಳಾದ್ದರಿಂದ ಅವರಿಂದ ಹಿಂದುಧರ್ಮಕ್ಕೆ ಚೆನ್ನಾಗಿ ಬೆಂಬಲವು ದೊರೆಯಿತು. ವಿಶೇಷವಾಗಿ ಶೈವಮತಕ್ಕೆ ಹೆಚ್ಚು ಉತ್ತೇಜನವು ಸಿಕ್ಕಿತು. ಕಾಶ್ಮೀರದ ಶೈವರು ಶೈವತತ್ವಗಳನ್ನು ಪ್ರತಿಪಾದಿಸುವ ಗ್ರಂಥಗಗಳನ್ನು ರಚಿಸಿದರು. **ಕಾಶಿ, ಜಗನ್ನಾಥಪುರಿ, ಭುವನೇಶ್ವರ, ಗಯೆ, ಖಜರಾಹೋ, ಕನೋಜ, ಉಜ್ಜಯಿನಿ, ನಾಲಂದ, ಕಾಶ್ಮೀರ** ಮುಂತಾದ ಸ್ಥಳಗಳಲ್ಲಿ ಭವ್ಯವಾದ ಮತ್ತು ಸುಂದರವಾದ ದೇವಾಲಯಗಳು ಸ್ಥಾಪಿಸಲ್ಪಟ್ಟವು.

**೬. ಸಾಹಿತ್ಯದ ಬೆಳವಣಿಗೆ :—** ಶಂಕರಾಚಾರ್ಯರು ಧರ್ಮ ಮತ್ತು ವೇದಾಂತ ವಿಷಯಗಳ ಮೇಲೆ ಸಂಸ್ಕೃತದಲ್ಲಿ ರಚಿಸಿದ ಗ್ರಂಥಗಳ ಅಭ್ಯಾಸವು ಒಳ್ಳೆಯ ಆಸ್ಥೆಯಿಂದ ಸಾಗಹತ್ತಿತು. ಕಾಶಿಯು ವಿದ್ಯೆಯ

ಕೇಂದ್ರವೆನಿಸಿತ್ತು. ಪಾಳವ, ಕನೋಜ, ಗುಜರಾಥ, ಚಾಲುಕ್ಯ ಮುಂತಾದ ಅರಸರ ಓಲಗದಲ್ಲಿ ಹಲವುಜನ ಪಂಡಿತರೂ ಕವಿಗಳೂ ಆಶ್ರಯವನ್ನು ಹೊಂದಿದ್ದರು. ಹೆಸರಾದ ಕಾವ್ಯ-ನಾಟಕಗಳನ್ನು ರಚಿಸಿದ **ವಾಕ್ಪತಿ, ಭೋಜ, ಮಾಘ,** ಭಟ್ಟನಾರಾಯಣ, **ಕಲ್ಹಣ, ಜಯದೇವ** ಮೊದಲಾದ ಕವಿಗಳು ಇದೇ ಕಾಲದಲ್ಲಿ ಆಗಿಹೋದರು.

# ೧೦ನೆಯ ಪಾಠ.

## ಪ್ರಾಚೀನ ಕಾಲದಲ್ಲಿಯ ದಕ್ಷಿಣ ಹಿಂದುಸ್ಥಾನದ ಕನ್ನಡ ಅರಸುಮನೆತನಗಳು.

(ಕ್ರಿ. ಶ. ಪೂ. ೩ನೆಯ ಶತಕದಿಂದ ಕ್ರಿ. ಶ. ೧೩ನೆಯ ಶತಕದವರೆಗೆ)



೧. **ಶಾತವಾಹನರು** :— ಕ್ರಿ. ಶ. ಪೂ. ೬೩೦ರಿಂದ ಕ್ರಿ. ಶ. ೨೨೬ರ ವರೆಗೆ ಈ ಶಾತವಾಹನರು ಗೋದಾವರಿ-ತುಂಗಭದ್ರೆಗಳ ನಡುವಿನ ಪ್ರದೇಶ ವನ್ನು ಸುಮಾರು ೪೫೦ ವರುಷ ಆಳಿದರು. ಉತ್ತರ ಹಿಂದುಸ್ಥಾನದ ಇತಿ ಹಾಸವನ್ನು ವಿವರಿಸುವಾಗ ಇವರ ಸಂಬಂಧವು ವಿಶೇಷವಾಗಿ ಬಂದದರಿಂದ ಈ ಮನೆತನದ ಹೆಚ್ಚಿನ ಸಂಗತಿಗಳನ್ನು ಅಲ್ಲಿಯೆ ಕೊಟ್ಟಿದೆ. (ಪುಟ ೫೮-೫೯)

೨. **ಕದಂಬರು :—** ಕ್ರಿ. ಶ. ೩ನೆಯ ಶತಕದಿಂದ ೬ನೆಯ ಶತಕದ ವರೆಗೆ **ಕದಂಬ** ಅರಸರು **ಬನವಾಸಿ** (ವೈಜಯಂತಿ) ಯಲ್ಲಿ ಆಳಿದರು. ಈಗಿನ **ಕಾರವಾರ, ಮಂಗಳೂರ** ಜಿಲ್ಲೆಗಳೂ **ಮೈಸೂರ** ಸೀಮೆಯೂ ಇವರ ರಾಜ್ಯಕ್ಕೆ ಸೇರಿದ್ದವು. ಈ ಮನೆತನದ ಮೂಲಪುರುಷನು **ಮಯೂರ ವರ್ಮ**ನೆಂಬ ಬ್ರಾಹ್ಮಣನು ಇವನು ವೇದಾಭ್ಯಾಸಕ್ಕಾಗಿ **ಕಂಚಿಗೆ** ಹೋಗಿರಲು ಪಲ್ಲವರಾಜರಿಂದ ಇವನ ಅಪಮಾನವಾಯಿತು. ಆಗ ಕೋಪ ಗೊಂಡು ಇವನು ಕ್ಷತ್ರಿಯವೃತ್ತಿಯನ್ನು ತಳೆದು, ಪರಾಕ್ರಮದಿಂದ ತನ್ನ

ದೊಂದು ರಾಜ್ಯವನ್ನೆ ಸ್ಥಾಪಿಸಿದನು ೬ನೆಯ ಶತಕದಲ್ಲಿ ಈ ಕದಂಬರು **ಚಾಲುಕ್ಯರ** ಮಾಂಡಲಿಕರಾಗಿದ್ದರು. ಈ ಮನೆತನವು ೧೪ನೆಯ ಶತಕದ ವರೆಗೆ ನಡೆಯಿತೆಂದು ತೋರುವುದು ಅಶೋಕನ ಶಾಸನಗಳಲ್ಲಿ ಈ ಕದಂಬರ ಹೆಸರು ಕಾಣಬರುತ್ತದೆ ಬನವಾಸಿಯ **ಮಧುಕೇಶ್ವರ**ನು ಈ ಅರಸರ ಕುಲದೇವತೆಯಾದದರಿಂದ ಈ ದೇವಸ್ಥಾನದ ವೈಭವಕ್ಕೆ ಎಣೆ ಇರಲಿಲ್ಲ. ಅತಿ ವಿಸ್ತಾರವಾಗಿ ವೈಭವದಿಂದ ಮೆರೆದ ಬನವಾಸಿಯು ಈಗ ಒಂದು ಸಾಧಾರಣ ಗ್ರಾಮವಾಗಿದೆ.

೩. **ಗಂಗರು:— ಗಂಗರಸರು** ಕ್ರಿ ಶ. ೨ನೆಯ ಶತಕದಿಂದ ಮೈಸೂರ ಪ್ರಾಂತದಲ್ಲಿ ಆಳಹತ್ತಿದರು. ೧೦ನೆಯ ಶತಕದಲ್ಲಿ ಈ ಅರಸರು ಜೈನಧರ್ಮಕ್ಕೆ ಆಶ್ರಯವನ್ನು ಕೊಟ್ಟಿದ್ದರು. ಈ ವಂಶದ **ರಾಜಮಲ್ಲ**ನ ಕಾಲದಲ್ಲಿ ಇವನ ಮಂತ್ರಿಯಾದ **ಚಾಮುಂಡ**ರಾಯನು **ಶ್ರವಬೆಳ್ಗೊಳದ ಗೋಮಟೇಶ್ವರ**ನ ೫೬॥ ಅಡಿ ಎತ್ತರವಾದ ಭವ್ಯ ಮೂರ್ತಿಯನ್ನು ಸ್ಥಾಪಿಸಿದನು **ಕವಿರನ್ನ, ಉಭಯಕವಿ** ಮುಂತಾದ ಬಿರುದುಗಳನ್ನು ಪಡೆದ **ರನ್ನ**ಕವಿಯು ಈ ಚಾಮುಂಡರಾಯನ ಆಶ್ರಯದಲ್ಲಿಯೆ ಇದ್ದನು. ಗಂಗರ ಒಂದು ಶಾಖೆಯವರು ಒಡಿಸಾ ಪ್ರಾಂತದಲ್ಲಿ ಕ್ರಿ. ಶ. ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ **ಆಳಿದರು.**

೪. **ಬಾದಾಮಿಯ ಚಾಲುಕ್ಯರು:—** (ಕ್ರಿ. ಶ. ೫೦೦–೭೫೦) ಈ **ಚಾಳುಕ್ಯ** ವಂಶಜರ ಮೂಲ ಪುರುಷನಾದ **ಜಯಸಿಂಹ**ನೆಂಬವನು ಕ್ರಿ. ಶ. ೫೦೦ರಲ್ಲಿ ಉತ್ತರ ಕರ್ನಾಟಕವನ್ನು ಆಳುತ್ತಿದ್ದ ರಾಷ್ಟ್ರಕೂಟರನ್ನು ಸೋಲಿಸಿ ಬಾದಾಮಿಯ ನೆರೆಯಲ್ಲಿ ತನ್ನ ಸಿಂಹಾಸನವನ್ನು ಸ್ಥಾಪಿಸಿದನು. ಚಾಳುಕ್ಯರ ನಾಲ್ಕನೆಯ ಅರಸನಾದ **೧ನೇ ಪುಲಿಕೇಶಿ**ಯು ಬಾದಾಮಿ ಪಟ್ಟಣವನ್ನು ವಶಮಾಡಿಕೊಂಡು ಅಲ್ಲಿಗೆ ತನ್ನ ಸಿಂಹಾಸನವನ್ನು ತಂದನು. ಇವನು ತನ್ನ ಪರಾಕ್ರಮದಿಂದ ಸಾರ್ವಭೌಮ ಪದವಿಯನ್ನು ಹೊಂದಿದನು. ಪುಲಿಕೇಶಿಯ ತರುವಾಯ ಇವನ ಮಗನಾದ **೧ನೆಯ ಕೀರ್ತಿವರ್ಮ**ನು ಕೊಂಕಣದ **ಮೌರ್ಯ**ರನ್ನೂ ಬನವಾಸಿಯ ಕದಂಬರನ್ನೂ ಸೋಲಿಸಿದನು. ಕೀರ್ತಿವರ್ಮನ ತರುವಾಯ ಇವನ ತಮ್ಮ **ಮಂಗಳೇಶ**ನು ಬಾದಾಮಿಯ ಗುಡ್ಡದ

ಲ್ಲೊಂದು ಕಲ್ಮನೆಯನ್ನು ಕೊರೆಯಿಸಿ ಅದರಲ್ಲಿ ವಿಷ್ಣುವಿನ ಪ್ರತಿಷ್ಠಾಪನೆಯನ್ನು ಮಾಡಿದನು

**೨ನೆಯ ಪುಲಿಕೇಶಿ:—** ಮಂಗಳೇಶನು ಕ್ರಿ. ಶ. ೬೦೮ರಲ್ಲಿ ಮರಣ ಹೊಂದಲು ಕೀರ್ತಿವರ್ಮನ ಮಗನಾದ ೨ನೆಯ ಪುಲಿಕೇಶಿಯು ಪಟ್ಟಕ್ಕೆ ಬಂದನು ಇವನು ಚಿಕ್ಕವನೆಂದು ತಿಳಿದು ಮಾಂಡಲಿಕರೆಲ್ಲರು ಸ್ವತಂತ್ರರಾ




**ದಕ್ಷಿಣದ ರಾಜ್ಯಗಳು**

ಗಲು ಹವಣಿಸಿ ಎಲ್ಲ ಕಡೆಗೆ ಪುಂಡಾಟಿಕೆಯನ್ನು ಎಬ್ಬಿಸಿದರು. ಆಗ ಪುಲಿಕೇಶಿಯು ದೊಡ್ಡ ದಂಡನ್ನು ಸಜ್ಜುಗೊಳಿಸಿಕೊಂಡು **ಕದಂಬ, ಗಂಗ** ಮಲಬಾರದ **ಅಳುಪ,** ಕೊಂಕಣದ **ಮೌರ್ಯ** ಮೊದಲಾದ ಅರಸರನ್ನು ಸೋಲಿಸಿ ದಂಗೆಯನ್ನು ಅಡಗಿಸಿದನು. ಬಳಿಕ **ಮಹಾರಾಷ್ಟ್ರಕ, ಕೋಸಲ, ಕಲಿಂಗ,**

**ಮಾಳವ, ಗುರ್ಜರ, ಕಾಂಚಿಯ, ಪಲ್ಲವ** ಈ ಅರಸರನ್ನು ಗೆದ್ದು ಅವರನ್ನು ತನ್ನ ಅಧಿಕಾರಕ್ಕೆ ಒಳಪಡಿಸಿಕೊಂಡನು. **ಚೋಳ, ಪಾಂಡ್ಯ, ಕೇರಳ** ದೇಶಗಳ ಅರಸರು ಇವನಿಗೆ ಶರಣು ಬಂದರು. ಹೀಗೆ ಇಡೀ ದಕ್ಷಿಣ ಹಿಂದುಸ್ಥಾನದ ಇವನ ಸಾಮ್ರಾಜ್ಯಕ್ಕೆ ಸೇರಿತು. ಸುರತದ ನೆರೆಯ **ನವಸಾರಿ** ಎಂಬಲ್ಲಿ ಒಂದು, ಮತ್ತು ಪಲ್ಲವರ ೧ನೆಯ ಮಹೇಂದ್ರವರ್ಮನಿಂದ ಸೆಳೆದುಕೊಂಡಿದ್ದ **ವೆಂಗಿ** ಪ್ರಾಂತದಲ್ಲಿ ಇನ್ನೊಂದು ಹೀಗೆ ಎರಡು ಶಾಖಾ ಸಿಂಹಾಸನಗಳನ್ನು ಸ್ಥಾಪಿಸಿದನು. ೨ನೆಯ **ಪುಲಿಕೇಶಿಯು** ತನ್ನ ಒಬ್ಬ ಮಗನಾದ **ಜಯಸಿಂಹ**ನನ್ನು ನವಸಾರಿಗೂ ತಮ್ಮನಾದ **ವಿಷ್ಣುವರ್ಧನ**ನನ್ನು ವೆಂಗಿ ದೇಶಕ್ಕೂ ಪ್ರತಿಸಿಧಿಗಳನ್ನಾಗಿ ನಿಯಮಿಸಿದನು. ಪಲ್ಲವರನ್ನು ಸೋಲಿಸುವ ಕೆಲಸದಲ್ಲಿ **ಪಾಂಡ್ಯ**ರೂ **ಚೋಳ**ರೂ ೨ನೆಯ ಪುಲಿಕೇಶಿಗೆ ಸಹಾಯಕರಾಗಿದ್ದರು. ನೂರು ಹಡಗಗಳ ಪಡೆಯೊಂದಿಗೆ ಪಡುವಣಕಡಲನ್ನು ಸೇರಿ ಮೌರ್ಯರ **ಪುರಿ** ಎಂಬ ಪಟ್ಟಣವನ್ನು ವಶಮಾಡಿಕೊಂಡನು.

ಉತ್ತರ ಹಿಂದುಸ್ಥಾನದಲ್ಲಿ ಇದೇ ಕಾಲಕ್ಕೆ ಸಾರ್ವಭೌಮನಾಗಿದ್ದ **ಶ್ರೀಹರ್ಷ**ನು ದಿಗ್ವಿಜಯವನ್ನು ಮಾಡುತ್ತ ನರ್ಮದೆಯನ್ನು ದಾಟಿ ದಕ್ಷಿಣಕ್ಕೆ ಬರುವ ಹವಣಿಕೆಯಲ್ಲಿದ್ದನು. ಪುಲಿಕೇಶಿಯು ಪ್ರಬಲವಾದ ದಂಡಿನೊಡನೆ ಆತನನ್ನು ಎದುರಿಸಿ ಹಲವು ಬಾರಿ ಗೆಲವನ್ನು ಹೊಂದಿದನು. ಬಂಗಾಲದ **ಶಶಾಂಕ**ನೂ ಕಾಠೇವಾಡದ **೨ನೇಯ ಧ್ರುವಸೇನ**ನೂ ಪುಲಿಕೇಶಿಗೆ ನೆರವಾದರು. ಈ ಗೆಲವಿನ ನೆನಪಿಗೆಂದು ಪುಲಿಕೇಶಿಯು "**ಪರಮೇಶ್ವರ**" ಎಂಬ ಬಿರುದನ್ನು ಧರಿಸಿದನು. ಪೂರ್ವ-ಪಶ್ಚಿಮ ಸಮುದ್ರಗಳೂ ನರ್ಮದಾ-ವಾಲಾರ ನದಿಗಳೂ ಚಾಳುಕ್ಯ ಸಾಮ್ರಾಜ್ಯದ ಮೇರೆಗಳಾಗಿದ್ದವು. ಇವರ ಕೀರ್ತಿಯು ವಿದೇಶಗಳಲ್ಲೂ ಹಬ್ಬಿತು. ಇರಾಣದ ಅರಸನು ತನ್ನ ರಾಯಭಾರಿಯನ್ನು ಪುಲಕೇಶಿಯ ಓಲಗಕ್ಕೆ ಕಳುಹಿದನು. ಇವನ ಹಿರಿಯ ಸೊಸೆಯಾದ **ಭಟ್ಟಾರಿಕೆಯು ಸಾವಂತವಾಡಿಯ** ಭಾಗವನ್ನು ಆಳಿದಳು. ಪ್ರಸಿದ್ಧನಾದ ಚೀನದ ಹ್ಯೂವೆನ್‌ತ್ಸಂಗನು ಕ್ರಿ. ಶ. ೬೪೧ರಲ್ಲಿ ಪುಲಿಕೇಶಿಯ ರಾಜ್ಯದಲ್ಲಿ ಸಂಚರಿಸಿ ಆತನ ರಾಜ್ಯವೈಭವವನ್ನು ಚೆನ್ನಾಗಿ ಬಣ್ಣಿಸಿರುವನು. ಆತನ ಬರೆಹದ ಕೆಲವಂಶವನ್ನು ಇಲ್ಲಿ ಕೊಟ್ಟಿದೆ.

**ಹ್ಯೂವೆನ್‌ತ್ಸಂಗನು ಮಾಡಿದ ವರ್ಣನೆಯು** :— "ಪುಲಿಕೇಶಿಯ ರಾಜ್ಯವು ಒಂದು ಸಾವಿರ ಮೈಲು ಹಬ್ಬಿದೆ. ಪಟ್ಟಣದ ವಿಸ್ತಾರವು ಹನ್ನೆರಡು ಮೈಲು ಆದೆ. ಭೂಮಿಯು ಬಹಳ ಬೆಳೆಯುಳ್ಳದ್ದು. ಹವೆಯು ಸೆಕೆಯುಳ್ಳದ್ದಾಗಿದೆ. ಜನರ ನೀತಿ-ನಡೆವಳಿಕೆಗಳು ಮೆಚ್ಚುವಂಥವು. ಪ್ರಾಮಾಣಿಕತನವು ಇವರಲ್ಲಿ ಕಂಡುಬರುವ ಎಲ್ಲಕ್ಕೂ ಹೆಚ್ಚಿನ ಸದ್ಗುಣವು. ಜನರ ನಿಲುವಿಕೆ ಎತ್ತರ, ಮುಖಮುದ್ರೆಯು ಸ್ವಾಭಿಮಾನ-ದರ್ಪಗಳನ್ನು ತೋರ್ಪಡಿಸುವದು. ಇವರು ಉಪಕಾರ ಮಾಡಿದವರನ್ನು ಎಂದೂ ಮರೆಯುವವರಲ್ಲ. ಹಾಗೆಯೇ, ಅಪಕಾರ ಮಾಡಿದವರ ಸೇಡು ತೀರಿಸಿಕೊಳ್ಳದೆಯೂ ಬಿಡತಕ್ಕವರಲ್ಲ. ಮರೆಹೊಕ್ಕವರನ್ನು ಕಾಯುವಲ್ಲಿ ತಮ್ಮ ಜೀವದ ಪರಿವೇ ಇವರಿಗಿರುವದಿಲ್ಲ. ಮೈಮರೆತಿರುವ ಶತ್ರುಗಳನ್ನು ಎಚ್ಚರಗೊಳಿಸಿಯೇ ಇವರು ಯುದ್ಧಕ್ಕೆ ನಿಲ್ಲುವರು. ಈ ರಾಜನ ಬಳಿಯಲ್ಲಿ ಸಾವಿಗಂಜದ ಲಕ್ಷಾವಧಿ ವೀರರಿರುವರು. ಪುಲಿಕೇಶಿಯು ದೊಡ್ಡ ಮನಸ್ಸಿನವನೂ ದಯಾಳುವೂ ಆಗಿರುವನು ಪ್ರಜೆಗಳು ಈತನನ್ನು ಒಳ್ಳೆಯ ನಿಷ್ಠೆಯಿಂದ ಕಾಣುವರು."

ಪ್ರತಾಪಶಾಲಿಯೂ ವೈಭವಸಂಪನ್ನನೂ ಜನಪ್ರಿಯನೂ ಆದ ಈ ಚಕ್ರವರ್ತಿಯು ಕ್ರಿ. ಶ. ೬೦೮ ರಿಂದ ೬೪೨ ರ ವರೆಗೆ ಆಳಿದನು. ಈತನ ಆಳಿಕೆಯ ಕೊನೆಯ ಭಾಗದಲ್ಲಿ ಪಲ್ಲವರು ಬಲಿಷ್ಠರಾಗಿ ಚಾಳುಕ್ಯರಾಜ್ಯದ ಪೂರ್ವಭಾಗವನ್ನು ಒಳನುಗ್ಗಿದರು. *

೨ನೆಯ ಪುಲಿಕೇಶಿಯ ತರುವಾಯ ಇವನ ಮಗನಾದ **ವಿಕ್ರಮಾದಿತ್ಯನು** ಪಲ್ಲವರನ್ನು ಸೋಲಿಸಿ ಅವರನ್ನು ಕಂಚಿಯ ವರೆಗೆ ಬೆನ್ನಟ್ಟಿ ಹೋಗಿದ್ದನು. ಇವನ ಹೆಂಡತಿಯಾದ **ಲೋಕಮಹಾದೇವಿಯು ಪಟ್ಟದಕಲ್ಲಿ**ನಲ್ಲ ವಿರೂಪಾಕ್ಷನ ಗುಡಿಯನ್ನು ಕಟ್ಟಿಸಿದಳು. ವಿಕ್ರಮಾದಿತ್ಯನ ತರುವಾಯ ಅವನ ಮಗನಾದ ೨ನೆಯ ಕೀರ್ತಿವರ್ಮನು ಆಳುತ್ತಿರಲು, ಚಾಳುಕ್ಯರ ಮಾಂಡಲಿಕನಾಗಿದ್ದ ರಾಷ್ಟ್ರಕೂಟರ **ದಂತಿದುರ್ಗ**ನೆಂಬವನು ಪ್ರಬಲನಾಗಿ ಚಾಳುಕ್ಯರ ಪಟ್ಟವನ್ನು ಕೈವಶ ಮಾಡಿಕೊಂಡನು. ಕ್ರಿ. ಶ. ೭೫೦.

* ಪಲ್ಲವರೊಡನೆ ಕಾದುವಾಗ ೨ನೆಯ ಪುಲಿಕೇಶಿಯು ಮಡಿದನೆಂದು ಕೆಲವರ ಅಭಿಪ್ರಾಯವದೆ.

ಚಾಳುಕ್ಯ ರಾಜರಿಂದ ಚಿತ್ರಕಲೆ - ಶಿಲ್ಪಕಲೆಗಳಿಗೆ ಉತ್ತೇಜನವು ದೊರೆಯಿತು. ಇವರು ವೈದಿಕ ಧರ್ಮದ ಅಭಿಮಾನಿಗಳಿದ್ದರೂ ಬೌದ್ಧರಿಗೂ, ಜೈನರಿಗೂ ಆಸರವನ್ನು ಕೊಟ್ಟಿದ್ದರು. ಬೌದ್ಧಧರ್ಮವು ಈ ಕಾಲದಲ್ಲಿ ಕಳೆಗುಂದಿತ್ತು. ಜೈನಧರ್ಮವು ಕಳೆಗೊಂಡಿತ್ತು. ಮತ್ತು ವೈದಿಕ ಧರ್ಮವು ಸುಸ್ಥಿತಿಯಲ್ಲಿತ್ತು.

---

## ೧೧ನೆಯ ಪಾಠ.

### ಕನ್ನಡ ಅರಸು ಮನೆತನಗಳು. (ಮುಂದೆ ಸಾಗಿದ್ದು)



೧. **ರಾಷ್ಟ್ರಕೂಟರು**:— (ಕ್ರಿ. ಶ. ೭೫೦ – ೯೭೩) **ರಾಷ್ಟ್ರಕೂಟರು** ತಮ್ಮ ನಾಡಗೌಡಿಕೆಯಿಂದ ಏರುತ್ತೇರುತ್ತ ಸಾರ್ವಭೌಮರಾದರು. **ಮಳಖೇಡವು** ಇವರ ರಾಜಧಾನಿಯು. ದಂತಿದುರ್ಗನು ಚಾಲುಕ್ಯರಿಂದ ಪಟ್ಟವನ್ನು ಕಸಿದುಕೊಂಡ ಬಳಿಕ, **ಕಾಂಚಿ, ಕಲಿಂಗ, ಕೋಸಲ, ಶ್ರೀಶೈಲ, ಮಾಳವ, ಲಾಟ, ಟಂಕ** (ಟೋಂಕ) ಈ ಅರಸರನ್ನು ಗೆದ್ದು ಇವರೆಲ್ಲರನ್ನು ತನ್ನ ಮಾಂಡಲಿಕರನ್ನು ಮಾಡಿಕೊಂಡನು. ಇವನ ತರುವಾಯ ಕ್ರಿ. ಶ. ೭೬೦–೭೭೫ರ ವರೆಗೆ **೧ನೆಯ ಕೃಷ್ಣ** ಅಥವಾ ಶುಭತುಂಗನು ಆಳಿದನು ಇವನು ಚಾಳುಕ್ಯರನ್ನು ಮತ್ತೊಮ್ಮೆ ಸೋಲಿಸಿ ಸಾಮ್ರಾಜ್ಯವನ್ನು ಸ್ಥಿರಗೊಳಿಸಿದನು. **ವೆರೂಳ**ದಲ್ಲಿ ಅತಿ ಸುಂದರವಾದ * **ಕೈಲಾಸ**ವೆಂಬ ಶಿವಾಲಯವನ್ನು ಕಟ್ಟಿಸಿದನು. ಇವನ ತರುವಾಯ ಇಮ್ಮಡಿ ಗೋವಿಂದನು ಆಳಹತ್ತಿದನು. ಇವನು ದುರ್ಬಲನಿದ್ದದರಿಂದ ಕ್ರಿ.ಶ. ೭೮೩ರಲ್ಲಿ ಇವನ ತಮ್ಮನಾದ **ಧ್ರುವರಾಜನು** ಅಣ್ಣನಿಂದ ಪಟ್ಟವನ್ನು ಆಕ್ರಮಿಸಿಕೊಂಡನು. ಈ ಧ್ರುವನ ಮಗನೇ **೩ ನೆಯ ಗೋವಿಂದನು.**

---

* ವೇರೂಳದ ಹತ್ತಿರ ೧೨ ಬೌದ್ಧ, ೧೭ ಶೈವ, ೫ ಜೈನ ಹೀಗೆ ಕಲ್ಮನೆಗಳು ಇವೆ. ಇವುಗಳಲ್ಲಿ ಕೈಲಾಸವು ೧೬ನೆಯದಾಗಿದೆ ಇದು ಒಂದೇ ಒಂದು ಬಂಡೆಯಲ್ಲಿ ಕೊರೆದು ಮಾಡಲ್ಪಟ್ಟಿದೆ. ಇದು ಜಗತ್ತಿನ ಪ್ರಸಿದ್ಧವಾದ ಕಟ್ಟಡಗಳಲ್ಲಿ ಒಂದಾಗಿದೆ

**೩ನೆಯ ಗೋವಿಂದ** :— (ಕ್ರಿ. ಶ. ೮೦೦–೮೧೪) ಈತನ ಪರಾಕ್ರಮವನ್ನು ಕಂಡು ತಂದೆಯಾದ ಧ್ರುವನು ತಾನಿರುವಾಗಲೆ ಈತನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂಬ ಬಯಸಿದನು. ಆದರೆ **ಗೋವಿಂದನು** ಇದಕ್ಕೆ ಒಪ್ಪಲಿಲ್ಲ. ತಂದೆಯ ತರುವಾಯ ಇವನು ಪಟ್ಟಕ್ಕೆ ಬರಲು ಇವನ ಅಣ್ಣ

ದಕ್ಷಿಣದ ರಾಜ್ಯಗಳು

ನಾದ **ಶಂಭನು** ಬೇರೆ ಹನ್ನೆರಡು ಜನ ಮಾಂಡಲಿಕರನ್ನು ಕೂಡಿಕೊಂಡು ಗೋವಿಂದನ ಮೇಲೆ ಸಾಗಿಬಂದನು. ಗೋವಿಂದನು ಧೈರ್ಯದಿಂದ ಅವರೆಲ್ಲರನ್ನು ಎದುರಿಸಿ ಸೋಲಿಸಿದನು. ಇವನು ತಂದೆಯ ಕಾಲಕ್ಕೆ ಸೆರೆಯಿದ್ದ ಗಂಗ ಅರಸನ ಬಿಡುಗಡೆ ಮಾಡಲು ಆ ಅರಸನು ತನ್ನ ದೇಶಕ್ಕೆ ಮುಟ್ಟಿದೊ

ಡನೆ ಮತ್ತೆ ಪುಂಡಾಟಿಕೆಯನ್ನು ಹೂಡಿದನು. ಆಗ ಗೋವಿಂದನು ಅವನನ್ನು ಹಿಡಿದು ತಂದು, ಇವನನ್ನು ಬಿಟ್ಟದ್ದೇ ತಪ್ಪೆಂದೆಣಿಸಿ ಪುನಃ ಸೆರೆಯಲ್ಲಿಟ್ಟನು.

ಈತನು ಉತ್ತರದ ಕಡೆಗೆ ವಿಜಯಯಾತ್ರೆಗೆ ಹೊರಟು ಗುಜರಾಥದ ಸಮೀಪಕ್ಕೆ ಬರುವಷ್ಟರಲ್ಲಿ ಅಲ್ಲಿಯ ಅರಸನು ಓಡಿಹೋದನು. ಆಗ ಗುಜರಾಥವನ್ನು ತನ್ನ ರಾಜ್ಯಕ್ಕೆ ಕೂಡಿಸಿ ಮಾಳವದ ಕಡೆಗೆ ನಾಗಿದನು. ಮಾಳವದ **ಮಾರಶರ್ಮನು** ಶರಣು ಬಂದು ಬೆಲೆಯುಳ್ಳ ಕಾಣಿಕೆಯನ್ನು ಅರ್ಪಿಸಿದನು. ಅಲ್ಲಿಂದ ತಿರುಗಿ ಬಂದು ಪಲ್ಲವರ **ದಂತಿಗನನ್ನು** ಮತ್ತೊಮ್ಮೆ ಹಣಿದು ಆತನನ್ನೂ ಪೂರ್ವ ಚಾಳುಕ್ಯರನ್ನೂ ಮಾಂಡಲಿಕರಲ್ಲಿ ಸೇರಿಸಿ ಕೊಂಡನು. ಬಳಿಕ ಹತ್ತುವರ್ಷ ಸಾಮ್ರಾಜ್ಯ ವೈಭವವನ್ನು ಅನುಭವಿಸಿ ಕ್ರಿ ಶ. ೮೧೪ರಲ್ಲಿ ಮರಣಹೊಂದಿದನು. ಈತನಿಗೆ **ಪ್ರಭೂತವರ್ಷ, ಜಗತ್ತುಂಗ, ಜಗದ್ರುದ್ರ** ಎಂಬ ಬಿರುದುಗಳಿದ್ದವು.

**೧ನೆಯ ಅಮೋಘವರ್ಷ ( ನೃಪತುಂಗ ) :—** ಕ್ರಿ. ಶ. ೮೧೪ರಿಂದ ೮೭೭. ೩ನೆಯ ಗೋವಿಂದನ ತರುವಾಯ ಇವನ ಮಗನಾದ ಅಮೋಘವರ್ಷನು ಪಟ್ಟಕ್ಕೆ ಬಂದನು. ಇವನಾದರೂ ಬಲು ಶೂರನೂ ರಾಜನೀತಿ ನಿಪುಣನೂ ಆಗಿದ್ದನು. ತಂದೆಯು ಗಳಿಸಿದ ರಾಜ್ಯವನ್ನು ಸ್ಥಿರಗೊಳಿಸಿದನು ವೆಂಗಿಯ ಪೂರ್ವಚಾಳುಕ್ಯರನ್ನು ಸೋಲಿಸಿದನು. ಕೊಂಕಣದ ಶಿಲಾಹರರು ಇವನ ಮಾಂಡಲಿಕರಾಗಿದ್ದರು. ನೃಪತುಂಗನೆಂದೂ ಇವನಿಗೆ ಹೆಸರಿತ್ತು.

**ನೃಪತುಂಗನ ಕಾಲದ ಕನ್ನಡ ವಾಙ್ಮಯದ ಬೆಳವಣಿಗೆ :—** ಈತನು ಸ್ವತಃ ಹೆಸರಾದ ಕನ್ನಡ ಕವಿಯಾಗಿದ್ದನು. “ **ಕವಿರಾಜಮಾರ್ಗ** ” ವೆಂಬ ಅಲಂಕಾರ ಶಾಸ್ತ್ರದ ಗ್ರಂಥವನ್ನು ಇವನು ಬರೆದಿರುವನು. ಈ ವರೆಗೆ ದೊರೆತಿರುವ ಪ್ರಾಚೀನ ಕನ್ನಡ ಗ್ರಂಥಗಳಲ್ಲಿ ಇದೇ ಮೊದಲನೆಯದು. ತನ್ನ ಆಸ್ಥಾನದಲ್ಲಿ ಕನ್ನಡ ಕವಿಗಳಿಗೆ ಆಶ್ರಯವನ್ನು ಕೊಟ್ಟಿದ್ದನು.

**ನೃಪತುಂಗನ ಪಾರಮಾರ್ಥಿಕ ದೃಷ್ಟಿ :—** ಈತನು ೬೪ ವರ್ಷ ರಾಜ್ಯವಾಳಿದ ನಂತರ ತಾನೇ ಸಂತೋಷದಿಂದ ರಾಜ್ಯವನ್ನು ಮಗನಾದ

**ಇಮ್ಮಡಿ ಕೃಷ್ಣ**ನಿಗೆ ಒಪ್ಪಿಸಿದನು. ಬಳಿಕ ವಾನಪ್ರಸ್ಥಾಶ್ರಮವನ್ನು ಹೊಂದಿದನು. ಈತನು ವೈದಿಕ ಮತದವನಾಗಿದ್ದರೂ ಜೈನಧರ್ಮಕ್ಕೂ ಉತ್ತೇಜನವನ್ನು ಕೊಟ್ಟಿದ್ದನು. ಜನಸೇನ ಭಟ್ಟಾರಕರ ಪ್ರೀತಿಗೆ ಪಾತ್ರನಾಗಿದ್ದನು. ಈತನಿಗೆ **ವೀರನಾರಾಯಣ, ಅತಿಶಯಧವಳ** ಮುಂತಾದ ಬಿರುದುಗಳಿದ್ದವು.

**೩ನೆಯ ಕೃಷ್ಣರಾಜನು** :— (ಕ್ರಿ. ಶ. ೯೩೯–೯೬೮). ನೃಪತುಂಗನ ತರುವಾಯ ಇಮ್ಮಡಿ ಕೃಷ್ಣ, ಮುಮ್ಮಡಿ ಇಂದ್ರ, ಇಮ್ಮಡಿ ಅಮೋಘವರ್ಷ, ನಾಲ್ವಡಿ ಗೋವಿಂದ, ಮುಮ್ಮಡಿ ಅಮೋಘವರ್ಷ ಎಂಬ ಐವರು ಆಳಿದ ಬಳಿಕ ಪ್ರಸಿದ್ಧನಾದ **ಮುಮ್ಮಡಿ**(೩ನೆಯ) **ಕೃಷ್ಣರಾಜನು** ಪಟ್ಟವನ್ನೇರಿದನು.

ಈತನು ದೊಡ್ಡ ಬಲದೊಡನೆ ದಕ್ಷಿಣ ದೇಶಕ್ಕೆ ವಿಜಯಯಾತ್ರೆಗೆ ಹೊರಟು **ಪಲ್ಲವ, ಪಾಂಡ್ಯ, ಚೋಳ, ಸಿಂಹಳ** ಅರಸರನ್ನು ಗೆಲಿದು **ರಾಮೇಶ್ವರ**ದ ಬಳಿಯಲ್ಲಿ ಒಂದು ವಿಜಯಸ್ತಂಭವನ್ನು ನಿಲ್ಲಿಸಿದನು. ಬಳಿಕ ಉತ್ತರಕ್ಕೂ ಸಾಗಿಹೋಗಿ ಗುರ್ಜರ, ಚೇದಿ ಮೊದಲಾದ ರಾಜರನ್ನು ಸೋಲಿಸಿ, **ಜುರಾ** ಎಂಬಲ್ಲಿ ಉತ್ತರದ ವಿಜಯಸ್ತಂಭವನ್ನು ನಿಲ್ಲಿಸಿದನು. ಹೀಗೆ ಈ ೩ನೆಯ ಕೃಷ್ಣರಾಜನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ವೈಭವವನ್ನು ಹೊಂದಿತು. **ಗಜಾಂಕುಶ ನಾರಾಯಣ**ನು ಮುಖ್ಯ ಮಂತ್ರಿಯೂ **ಚಕ್ರಾಯುಧಬುಧ**ನು ಉಪಮಂತ್ರಿಯೂ ಆಗಿದ್ದರು. ಇವರೀರ್ವರೂ ಬ್ರಾಹ್ಮಣರೇ.

**೩ನೆಯ ಕೃಷ್ಣರಾಜನ ಕಾಲದ ವಿದ್ಯೆಯ ಪ್ರಗತಿ**:— ಕೃಷ್ಣರಾಜನು ವಿದ್ಯಾಪಕ್ಷಪಾತಿಯಾಗಿದ್ದನು. ಸುಪ್ರಸಿದ್ಧ ಕನ್ನಡ ಕವಿಯಾದ **ಪೊನ್ನ**ನೂ ಸಂಸ್ಕೃತದಲ್ಲಿ **ಕವಿರಹಸ್ಯ**ವೆಂಬ ಕಾವ್ಯವನ್ನು ಬರೆದ **ಹಲಾಯುಧ**ನೂ ಈತನ ಆಸ್ಥಾನದಲ್ಲಿದ್ದರು. **ಪುಲಿಗೆರೆಯ ಆದಿಪಂಪ**ನೆಂಬ ಕನ್ನಡ ಕವಿಯು ಇದೇ ಕಾಲದಲ್ಲಿ ಆಗಿಹೋದನು. ***ಪವಟ್ಟಿಗೆ**ಯು ಪ್ರಸಿದ್ಧವಾದ ವಿದ್ಯಾಲಯ

---

* ವಿಜಾಪುರ ಜಿಲ್ಹೆಯ ಇಂಡಿ ತಾಲೂಕಿನಲ್ಲಿರುವ ಸಾಲೋಟಗಿ ಎಂಬ ಊರೇ ರಾಷ್ಟ್ರಕೂಟರ ಕಾಲದ ಪವಿಟ್ಟಗೆಯು. ವಿದ್ಯೆಯನ್ನು ಕಲಿಸುವ ಸ್ಥಳಗಳಿಗೆಲ್ಲ ಜನಸಾಮಾನ್ಯರು 'ಸಾಲೆ' ಎಂಪೆನ್ನುವದು ಸ್ವಾಭಾವಿಕವು. ಸಾಲೆಯ "ಸಾಲೆಯ ಗವಿಟ್ಟಗಿ" ಎಂಬ ಜನರೂಢಿಯ ಪೆಸರೇ ಬರಬರುತ್ತ 'ಸಾಲೋಟಗಿ' ಎಂದು ಆಗಿರಬಹುದು.

(ಪಾಠಶಾಲೆ) ವಾಗಿತ್ತು. ಅಲ್ಲಿ **ವೇದ, ದರ್ಶನ, ಮೀಮಾಂಸೆ, ಧರ್ಮಶಾಸ್ತ್ರ** ಮುಂತಾದ ಎಲ್ಲ ವಿಷಯಗಳ ಅಭ್ಯಾಸವು ನಡೆಯುತ್ತಿತ್ತು. ಹೀಗೆ ಸಕಲ ವಿದ್ಯೆಗಳಿಗೂ ಈ ಕೃಷ್ಣರಾಜನು ಆಧಾರನಾಗಿದ್ದನು.

**ರಾಷ್ಟ್ರಕೂಟ ಮನೆತನದ ಕಡೆ :—** ೩ನೆಯ ಕೃಷ್ಣರಾಜನ ತರುವಾಯ **ಕೊಟ್ಟಿಗ, ಇಮ್ಮಡಿಕಕ್ಕಲ** ಎಂಬ ಈರ್ವರು ಅರಸರು ಆಳಿದರು. ಇಮ್ಮಡಿ ಕಕ್ಕಲನು ಆಳುವಾಗ, ಬಾದಾಮಿಯ ಚಾಲುಕ್ಯ ವಂಶದ * **ನೂರ್ಮಡಿ ತೈಲಪನು** ಇವನನ್ನು ಗೆಲಿದು, ರಾಷ್ಟ್ರಕೂಟರು ಮೊದಲು ತಮ್ಮ ಪೂರ್ವಜರಿಂದ ಕಸಿದುಕೊಂಡಿದ್ದ ಸಿಂಹಾಸನವನ್ನು ಕೈವಶಮಾಡಿಕೊಂಡು, ಚಾಳುಕ್ಯ ಸಾಮ್ರಾಜ್ಯವನ್ನು ಮರಳಿ ಸ್ಥಾಪಿಸಿದನು.

## ೧೨ನೆಯ ಪಾಠ.

### ಕನ್ನಡ ಅರಸುಮನೆತನಗಳು.

(ಮುಂದೆ ಸಾಗಿದ್ದು)



**೧. ಪಶ್ಚಿಮ (ಕಲ್ಯಾಣ) ಚಾಳುಕ್ಯರು :—** (ಕ್ರಿ. ಶ. ೯೭೩-೧೧೮೯) **ನೂರ್ಮಡಿ ತೈಲಪನು** :— (ಕ್ರಿ. ಶ. ೯೭೩—೯೯೭). ಈತನು ಸಾಮ್ರಾಜ್ಯವನ್ನು ಸ್ಥಾಪಿಸಿದ ಬಳಿಕ ದಕ್ಷಿಣ ದೇಶಕ್ಕೂ ದಂಡೆತ್ತಿ ಹೋಗಿ **ಚೋಳರಿಂದ** ಮೊದಲು ಕಪ್ಪಕಾಣಿಕೆಗಳನ್ನು ತೆಗೆದುಕೊಂಡನು. ಸವದತ್ತಿಯ **ರಟ್ಟರೂ** ಕೊಂಕಣದ **ಶಿಲಾಹಾರರೂ** ಕೇವಲ ಇವನ ಹೇಳಿಕೆಯಂತೆ ನಡೆದುಕೊಳ್ಳಹತ್ತಿದರು. **ಗುಜರಾಥದ** ಅರಸನು ಇವನ ಅಂಕಿತನಾದನು. ದೇವಗಿರಿಯ ಯಾದವರ **೨ನೆಯ ಭಿಲ್ಲಮನನ್ನು** ನೆರವಿಗೆ ಕರೆದುಕೊಂಡು ಮಾಳವದ

* ಕ್ರಿ. ಶ. ೭೫೦ರಲ್ಲಿ ಬಾದಾಮಿಯ ಚಾಳುಕ್ಯರ ಸಾಮ್ರಾಜ್ಯವು ನಷ್ಟವಾದ ಬಳಿಕ, ಆ ಮನೆತನದವರು ಸುಮಾರು ೨೨೩ ವರ್ಷಗಳ ವರೆಗೆ ಎಂದರೆ, ನೂರ್ಮಡಿ ತೈಲಪನು ರಾಷ್ಟ್ರಕೂಟರಿಂದ ಪಟ್ಟವನ್ನು ತಕ್ಕೊಳ್ಳುವ ವರೆಗೆ, ಎಲ್ಲಿ ಇರುತ್ತಿದ್ದರೆಂಬದು ಇನ್ನೂ ಗೊತ್ತಾಗಿಲ್ಲ.

**ಮುಂಜ**ರಾಜನನ್ನು ಸೋಲಿಸಿ ಸೆರೆಯಲ್ಲಿಟ್ಟನು. ಸೆರೆಯಿಂದ ಪಾರಾಗಿ ಓಡಿ ಹೋಗುವ ಪ್ರಯತ್ನಮಾಡಿದ್ದರಿಂದ ತೈಲಪನು ಆ ಮುಂಜನನ್ನು ಕೊಲ್ಲಿಸಿದನು. **ಚೇದಿ, ಉತ್ಕಲ**ಗಳ ಅರಸರು ಇವನ ಅಧಿರಾಜ್ಯವನ್ನೊಪ್ಪಿದರು. **ಮಳಖೇಡ, ಯಾತಗಿರಿ** ಇವು ಇವನ ರಾಜಧಾನಿಗಳಾಗಿದ್ದವು.




## ದಕ್ಷಿಣದ ರಾಜ್ಯಗಳು

ತೈಲಪನು ಶೂರನಾಗಿದ್ದಂತೆ ವಿದ್ಯಾಭಿಮಾನಿಯೂ ಆಗಿದ್ದನು. ಸುಪ್ರಸಿದ್ಧ ಕನ್ನಡ ಕವಿಯಾದ **ರನ್ನ**ನಿಗೆ “ **ಕವಿಚಕ್ರವರ್ತಿ** ” ಎಂಬ ಬಿರುದನ್ನೂ **ಕನಕದಂಡ** – **ಛತ್ರ** – **ಚಾಮರ**-**ಆನೆ**ಗಳನ್ನೂ ಕೊಟ್ಟು ಮನ್ನಿಸಿದನು. ಈ ಅರಸನಿಗೆ **ಚಾಳುಕ್ಯಾಭರಣ, ಸತ್ಯಾಶ್ರಯ ಕುಲತಿಲಕ, ಆಹವಮಲ್ಲ** ಎಂಬ ಬಿರುದುಗಳಿದ್ದವು.

೨. **೧ನೆಯ ಸೋಮೇಶ್ವರ** :— ( ಕ್ರಿ. ಶ. ೧೦೪೨—೧೦೬೮ ) ತೈಲಪನ ತರುವಾಯ **ಇರಿವಬೆಡಂಗ, ೫ನೆಯ ವಿಕ್ರಮಾದಿತ್ಯ, ಜಯಸಿಂಹ** ಎಂಬ ಮೂವರು ಆಳಿದ ಬಳಿಕ **೧ನೆಯ ಸೋಮೇಶ್ವರನು** ಪಟ್ಟಕ್ಕೆ ಬಂದನು. ಇವನ ಆಳಿಕೆಯಲ್ಲಿ ದಿಗ್ವಿಜಯದ ಎಲ್ಲ ಕಾರ್ಯಗಳನ್ನು ಇವನ ೨ನೆಯ ಮಗನಾದ **ವಿಕ್ರಮಾದಿತ್ಯನೇ** ನೆರವೇರಿಸಿದನು. ವಿಕ್ರಮಾದಿತ್ಯನು ಮೊದಲು **ಚೋಳರಾಜೇಂದ್ರನನ್ನು ಮೈಸೂರ** ಬಳಿಯಲ್ಲಿ ಸೋಲಿಸಿದನು. **ಮಾಳವದ** ಅರಸನು ಇವನ ಸಹಾಯವನ್ನು ಕೇಳಲು, ವಿಕ್ರಮನು ಮಾಳವದ ವೈರಿಯನ್ನು ಓಡಿಸಿ, ಧಾರಾನಗರವನ್ನು ಕೈವಶಮಾಡಿಕೊಂಡು ಮಾಳವ ರಾಜನಿಗೆ ಬಂದ ಸಂಕಟವನ್ನು ನೀಗಿದನು. ಬಳಿಕ ಅಲ್ಲಿಂದ ಹೊರಟು **ಗೌಡ** (ಬಂಗಾಲ), **ಕಾಮರೂಪ** (ಆಸಾಮು) ಗಳ ಅರಸರನ್ನು ವಶಪಡಿಸಿಕೊಂಡನು. ಮತ್ತು **ಕೇರಳ, ಚೋಳ, ಸಿಂಹಳದ್ವೀಪ** ಈ ದಕ್ಷಿಣ ದೇಶಗಳ ಅರಸರನ್ನು ಮಾಂಡಲಿಕರನ್ನು ಮಾಡಿಕೊಂಡು ತಂದೆಯ ಸಾಮ್ರಾಜ್ಯವನ್ನು ವಿಸ್ತರಿಸಿ ಬಲಪಡಿಸಿದನು.

ಈರೀತಿ ವಿಕ್ರಮನ ವಿಜಯಯಾತ್ರೆಯು ನಡೆದಿರಲು ಅತ್ತ ಸೋಮೇಶ್ವರನು ಬೇನೆಬಿದ್ದನು. ತಾನು ಈ ಬೇನೆಯಿಂದ ಪಾರಾಗಿ ಉಳಿಯುವ ದಿಲ್ಲೆಂದು ನೆನೆದು, ಸೋಮೇಶ್ವರನು ತುಂಗಭದ್ರೆಯ ದಂಡೆಯಲ್ಲಿಯ **ಕುರುವತ್ತಿ** ಎಂಬ ಗ್ರಾಮವನ್ನು ತಲುಪಿ, ವಿಧಿಪೂರ್ವಕವಾಗಿ ಸ್ನಾನಾದಿಗಳನ್ನು ತೀರಿಸಿ, ಹೇರಳವಾದ ಬಂಗಾರವನ್ನು ದಾನಮಾಡಿ, ಶಾಂತಚಿತ್ತದಿಂದ ಜಲಸಮಾಧಿಯನ್ನು ಹೊಂದಿದನು! ಆ ದಿನ ಶಕವರ್ಷದ ೯೯೦ನೆಯ ಕೀಲಕ ಸಂವತ್ಸರದ ಚೈತ್ರ ಕೃಷ್ಣ ಅಷ್ಟಮಿಯ ರವಿವಾರವಿದ್ದಿತು. ಈ ಸೋಮೇಶ್ವರ ರಾಜಯೋಗಿಗೆ **ತ್ರೈಲೋಕ್ಯಮಲ್ಲ, ಅಹವಮಲ್ಲ,** ಎಂಬೆರಡು ಬಿರುದುಗಳಿದ್ದವು. ಕ್ರಿ. ಶ. ೧೦೫೩ರಲ್ಲಿ **ಕಲ್ಯಾಣ** ಪಟ್ಟಣವನ್ನು ನೆಲೆಸಿ ಅದನ್ನು ರಾಜಧಾನಿಯನ್ನು ಮಾಡಿಕೊಂಡು, ಕ್ರಿ. ಶ. ೧೦೬೮ ರ ವರೆಗೆ ಎಂದರೆ ೨೪ ವರುಷ ದಕ್ಷತೆಯಿಂದ ರಾಜ್ಯಭಾರವನ್ನು ಸಾಗಿಸಿದನು.

೩. **೨ನೆಯ ಸೋಮೇಶ್ವರ** :— ( ಕ್ರಿ. ಶ. ೧೦೬೮–೧೦೭೬). ೧ನೆಯ ಸೋಮೇಶ್ವರನ ತರುವಾಯ ಅವನ ಹಿರಿಯ ಮಗನಾದ **೨ನೆಯ ಸೋಮೇ**

**ಶ್ವರನು** ಪಟ್ಟಕ್ಕೆ ಕುಳಿತನು. ವಿಕ್ರಮನು **ವೆಂಗಿ** ದೇಶದ ಮೇಲೆ ವಿಜಯವನ್ನು ಪಡೆದು ಬರುತ್ತಿರುವಾಗ ದಾರಿಯಲ್ಲಿ ತಂದೆಯು ಸಮಾಧಿಯನ್ನು ಹೊಂದಿದ ಸುದ್ದಿಯನ್ನು ಕೇಳಿದನು. ಕೂಡಲೆ ಆವನು ಕಲ್ಯಾಣಕ್ಕೆ ಬರಲು ಅಣ್ಣನಾದ ೨ನೆಯ ಸೋಮೇಶ್ವರನು ಪ್ರೀತಿಯಿಂದ ಇದಿರ್ಗೊಂಡನು. ವಿಕ್ರಮನಾದರು ವಿಜಯಯಾತ್ರೆಯಿಂದ ತಂದಿದ್ದ ಸಂಪತ್ತನ್ನೆಲ್ಲ ಅಣ್ಣನ ಕಡೆಗೆ ಒಪ್ಪಿಸಿದನು. ಹೀಗೆಯೆ ಕೆಲದಿನ ಪರಸ್ಪರರು ಪ್ರೇಮದಿಂದಿದ್ದರು. ಆದರೆ ಮುಂದೆ ಸೋಮೇಶ್ವರನು ಹಿತಚಿಂತಕರಾದ ಮಂತ್ರಿಗಳ ಮತ್ತು ತಮ್ಮಂದಿರ ಮಾತುಗಳನ್ನು ದುರ್ಲಕ್ಷಿಸಿ ಮನಬಂದಂತೆ ನಡೆದು ಪ್ರಜೆಗಳಿಗೆ ಅಪ್ರಿಯನಾದನು ಅಲ್ಲದೆ ತಮ್ಮನಾದ ವಿಕ್ರಮನ ಪರಾಕ್ರಮದ ವಿಷಯವಾಗಿ ಅಸೂಯೆಯನ್ನು ತಳೆದನು

೪. **ವಿಕ್ರಮನ ವಿಜಯಗಳು:—** ಈ ಹೊತ್ತಿನಲ್ಲಿ ಇಲ್ಲಿರುವದು ಹೆಚ್ಚಿನ ದ್ವೇಷಕ್ಕೆ ಕಾರಣವೆಂದು ಬಗೆದು, ವಿಕ್ರಮನು ದೊಡ್ಡ ಸೈನ್ಯದೊಡನೆ ಮಲತಮ್ಮನಾದ ಜಯಸಿಂಹನಿಂದ ಕೂಡಿಕೊಂಡು ಕಲ್ಯಾಣವನ್ನು ಬಿಟ್ಟು ಹೊರಟನು. ಆಗ ೨ನೆಯ ಸೋಮೇಶ್ವರನು ಈತನನ್ನು ನೆರೆಹಿಡಿಯುವದಕ್ಕಾಗಿ ತಾನೂ ಸೈನ್ಯ ತಕ್ಕೊಂಡು ಬೆನ್ನುಹತ್ತಿದನು. ವಿಕ್ರಮನು ಅಣ್ಣನ ಸೈನ್ಯವನ್ನು ಹಣಿದು ಮುಂದಕ್ಕೆ ನಾಗಿ, ಕಂಪಲಿ ಎಂಬಲ್ಲಿ ಕೆಲಕಾಲ ವಿಶ್ರಮಿಸಿದನು. ಬಳಿಕ ಮತ್ತೆ ದಿಗ್ವಿಜಯಕ್ಕಾಗಿ ಹೊರಟನು. **ಗೋಪಕ (ಗೋವೆ)** ಪಟ್ಟಣದ **ಜಯಕೇಶಿ ಕದಂಬನು** ಕಾಣಿಕೆಯೊಡನೆ ಈತನಿಗೆ ಶರಣು ಬಂದನು. ವಿಕ್ರಮನು ಸಂತುಷ್ಟನಾಗಿ ಅವನೊಡನೆ ಸ್ನೇಹವನ್ನು ಬೆಳಿಸಿ, ತನ್ನ ಮಗಳಾದ **ಮೈಳಲದೇವಿಯನ್ನು** ಜಯಕೇಶಿಯ ಮೊಮ್ಮಗನಾದ **೨ನೆಯ ಜಯಕೇಶಿಗೆ** ಧಾರೆಯೆರೆದು ಕೊಟ್ಟನು. **ಅಳುಪ,** ಮತ್ತು **ಕೇರಳ** ಇವುಗಳ ಅರಸರು ಇವನ ಅಧಿರಾಜ್ಯವನ್ನು ಒಪ್ಪಿದರು. **ವೀರರಾಜೇಂದ್ರ** ಚೋಳನು ವಿಕ್ರಮನು ಬಂದ ಸುದ್ದಿಯನ್ನು ಕೇಳಿ, ತನ್ನ ರಾಯಭಾರಿಯನ್ನು ಕಳುಹಿ, 'ಮಾಂಡಲಿಕನಾಗಿರುವೆನೆಂದು ಒಪ್ಪುವೆನಲ್ಲದೆ, ನನ್ನ ಮಗಳನ್ನು ಮದುವೆ ಮಾಡಿ ಕೊಡುವೆನು, ತಾವು ದಯವಿಟ್ಟು ಸ್ವೀಕರಿಸಬೇಕು' ಎಂದು ತಿಳಿಸಿ ವಿಕ್ರಮನು ವೀರರಾಜೇಂದ್ರನ ವಿನಂತಿಯನ್ನು ಮನ್ನಿಸಿ, ಅಲ್ಲಿಂದ ಹೊರಟು

ಕಂಪಿಲಿ ಪಟಣಕ್ಕೆ ಬಂದನು. ಚೋಳರಾಜನು ಪರಿವಾರದೊಡನೆ ಕಂಪಿಲಿಗೆ ಬಂದು ಲಗ್ನಕಾರ್ಯವನ್ನು ನೆರವೇರಿಸಿದನು.

**ರಾಜಗನ ಒಳಸಂಚು**:— ಕ್ರಿ. ಶ. ೧೦೭೦ರಲ್ಲಿ ವೀರರಾಜೇಂದ್ರನು ಮರಣಹೊಂದಿದ ಬಳಿಕ ಚೋಳ ಸಿಂಹಾಸನವು ವೈರಿಗಳ ಪಾಲಾಗುವ ಪ್ರಸಂಗವು ಒದಗಿತು. ಆಗ ವಿಕ್ರಮನು ಕಾಂಚಿಗೆ ಹೋಗಿ ಶತೃಗಳನ್ನು ದೂರಮಾಡಿ, ಮಾವನ ಮಗನಾದ **ಅಧಿರಾಜನನ್ನು** ಪಟ್ಟಕ್ಕೆ ಕುಳ್ಳಿರಿಸಿ ಹಿಂದಿರುಗಿ ಕಂಪಲಿಗೆ ಬಂದನು. ಅಧಿರಾಜನ ಸೋದರತ್ತೆಯ ಮಗನಾದ **ರಾಜಿಗ (ಕುಲೋತ್ತುಂಗ)** ನೆಂಬ ವೆಂಗಿಯ ಚಾಳುಕ್ಯ ಅರಸನು ಚೋಳ ಸಿಂಹಾಸನವನ್ನು ಕೈಸೇರಿಸಿಕೊಂಡು, ೨ನೆಯ ಸೋಮೇಶ್ವರನನ್ನು ತನ್ನ ಕಡೆಗೆ ಒಲಿಸಿಕೊಂಡು ಚೆನ್ನಾಗಿ ಯುದ್ಧದ ಸಿದ್ಧತೆಯನ್ನು ಮಾಡಿದನು.

**ಅಧಿರಾಜನನ್ನು ರಕ್ಷಿಸಿದ್ದು**:— ವಿಕ್ರಮನು ಮತ್ತೆ ಚೋಳರಾಜನ ರಕ್ಷಣೆಗೆ ಹೊರಟನು. ಅವನು ರಾಜಿಗನ ಸೈನ್ಯವನ್ನು ಎದುರಿಸುವಷ್ಟರಲ್ಲಿ ಹಿಂದುಗಡೆಯಲ್ಲಿ ೨ನೆಯ ಸೋಮೇಶ್ವರನು ದೊಡ್ಡ ಸೈನ್ಯದೊಡನೆ ವೈರಿಯಾಗಿ ಬಂದುಬಿಟ್ಟನು. ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಂತೆ ವಿಕ್ರಮನ ಸ್ಥಿತಿಯಾಯಿತು. ಆಗ ಆತನು ಅಣ್ಣನಿಗೆ– "ನೀನು ವೈರಿಯ ಸಹಾಯಕನಾಗಿ ನಿಲ್ಲುವದು ಒಳ್ಳೆಯದಲ್ಲ, ಈ ತಪ್ಪು ದಾರಿಯನ್ನು ಹಿಡಿಯದೆ ನನ್ನ ಕಡೆಗೆ ಬರಬೇಕು" ಎಂದು ಹಲವು ತರದಿಂದ ಹೇಳಿಕೊಂಡನು. ಆದರೆ ಈ ಮಾತು ೨ನೆಯ ಸೋಮೇಶ್ವರನಿಗೆ ಸರಿದೋರಲಿಲ್ಲ. ಆಗ ವಿಕ್ರಮನು ಇಂಥ ಕಠಿಣ ಪ್ರಸಂಗದಲ್ಲಿಯೂ ಶೌರ್ಯದಿಂದ ಕಾದಿ ಎರಡೂ ಸೈನ್ಯಗಳನ್ನು ಸೋಲಿಸಿ, ಜಯಹೊಂದಿದನು. ರಾಜಿಗನು ಓಡಿಹೋದನು; ಸೋಮನು ಸೆರೆಸಿಕ್ಕನು. ಬಳಿಕ ವಿಕ್ರಮನು ಚೋಳರಾಜ್ಯವನ್ನು ಸ್ಥಿರಪಡಿಸಿ, ಅಣ್ಣನನ್ನು ಸೆರೆಹಿಡಿದುಕೊಂಡು **ಯಾತಗಿರಿಗೆ** ಬಂದನು. ೨ನೆಯ ಸೋಮೇಶ್ವರನು ರಾಜ್ಯಕ್ಕೆ ಎರವಾದನು!

---

# ೧೩ನೆಯ ಪಾಠ.

## ಕನ್ನಡ ಅರಸು ಮನೆತನಗಳು. (ಮುಂದೆ ಸಾಗಿದ್ದು)



**೧. ೬ನೆಯ ವಿಕ್ರಮಾದಿತ್ಯ (ವಿಕ್ರಮಾಂಕ):—** (ಕ್ರಿ. ಶ. ೧೦೭೬–೧೧೭೭). ಬಳಿಕ ವಿಕ್ರಮನು ಅಣ್ಣನ ಅಧಿಕಾರವನ್ನು ಕಿತ್ತೊಗೆದು ಶಕ ವರ್ಷದ ೯೯೭ನೆಯ ರಾಕ್ಷಸ ಸಂವತ್ಸರದ ಫಾಲ್ಗುಣ ಶುಕ್ಲ ಪಂಚಮಿಯ ಸೋಮವಾರ ದಿವಸ **ಪಟ್ಟಬಂಧೋತ್ಸವವನ್ನು** ಮಾಡಿಸಿಕೊಂಡನು. '**ಶಕ ವರ್ಷ**,' ಎಂಬ ರೂಢಿಯಲ್ಲಿದ್ದ, ಕಾಲಗಣನೆಯನ್ನು ನಿಲ್ಲಿಸಿ, ತನ್ನ ಹೆಸರಿನ *'**ಶ್ರೀಮಚ್ಚಾಳುಕ್ಯ ವಿಕ್ರಮವರ್ಷ** ಎಂಬ ಕಾಲಗಣನೆಯನ್ನು ಪ್ರಾರಂಭಿಸಿದನು. ಈತನು ಪಟ್ಟಕ್ಕೆ ಬರುವ ಮೊದಲೇ ಎಂದರೆ, ತಂದೆಯ ಮತ್ತು ಅಣ್ಣನ ಆಳಿಕೆಯಲ್ಲಿಯೆ ತನ್ನ ಪರಾಕ್ರಮವನ್ನು ವ್ಯಕ್ತಗೊಳಿಸಿದ್ದನು. ಆದದರಿಂದ ದಿಗ್ವಿಜಯವನ್ನೇನು ಹೊಸದಾಗಿ ಮಾಡುವ ಆವಶ್ಯವಿರಲಿಲ್ಲ. ಇಡಿ ದಕ್ಷಿಣವನ್ನು ಅಧಿರಾಜ್ಯಕ್ಕೆ ಸೇರಿಸಿಕೊಂಡದ್ದಲ್ಲದೆ **ಸಿಂಹಳ ದ್ವೀಪ, ಚೇದಿ, ಮಾಳವ, ಕನೋಜ, ಗೌಡ, ಕಾಮರೂಪ** ಇವುಗಳ ಅರಸರನ್ನೂ ಜಯಿಸಿದ್ದರಿಂದ ಇಡಿ ಹಿಂದುಸ್ಥಾನಕ್ಕೆ ಇವನು ಸಾರ್ವಭೌಮನಾದನು.

**ಚಂದ್ರಲೇಖೆಯ ಸ್ವಯಂವರ:—** ಈತನು ಸಾರ್ವಭೌಮನಾಗಿ ಆಳುವಾಗ **ಕರ್ಹಾಡದ** ಅರಸನು ತನ್ನ ಮಗಳಾದ **ಚಂದ್ರಲೇಖೆಯ** ಸ್ವಯಂವರವನ್ನು ಮಾಡತೊಡಗಿದನು. ಚಂದ್ರಲೇಖೆಯನ್ನು ಲಗ್ನಮಾಡಿ

---

* ಚಾಳುಕ್ಯ ವಿಕ್ರಮಾಂಕನ ಪರಾಕ್ರಮ ಹಾಗು ಅವನು ಆರಂಭಿಸಿದ ಕಾಲಗಣನೆ ಇವನ್ನು ವರ್ಣಿಸುವ ಕೆಳಗಿನ ಎರಡು ಪದ್ಯಗಳು ಗದಗಿನ ಶ್ರೀ ವೀರನಾರಾಯಣನ ದೇವಾಲಯದಲ್ಲಿದ್ದ ಶಿಲಾಲೇಖದಲ್ಲಿ ಇರುವವು.

| | |
|---|---|
| ಬಲಾಳ್ವನದಿಂ ರಿಪುನೃಪ । | ಎಸೆವ ಶಕವರುಷಮುಂಮಾ- । |
| ರೆಲ್ಲರನೇಕಾಂಗದಿಂದಮೊದಗಿಸಿ ಧರೆಗೇ ॥ | ಣಿಸಿ ವಿಕ್ರಮ ವರುಷವೆಂದು ತನ್ನಯ ಪೆಸರಂ ॥ |
| ವಲ್ಲಭನಾದಂ ತ್ರಿಭುವನ- । | ವಸುಮತಿಗೆ ನೆಗಳ್ಚಿದಂ ಸಾ- । |
| ಮಲ್ಲಂ ಚಾಳುಕ್ಯ-ವಿಕ್ರಮಾದಿತ್ಯ-ನೃಪಂ ॥೧॥ | ಹಸಿಗಂ ಜಗದೇಕದಾನಿ ಧರ್ಮ ವಿನೋದಂ ॥೨ |

ಕೊಳ್ಳುವ ಉದ್ದೇಶದಿಂದ **ಅಯೋಧ್ಯಾ, ಕಾನ್ಯಕುಬ್ಜ** ಮೊದಲಾದ ಅನೇಕ ರಾಜರು ಸ್ವಯಂವರಕ್ಕೆ ಬಂದಿದ್ದರು. ಚಂದ್ರಲೇಖೆಯು ಸ್ವಯಂವರ ಮಂಟಪವನ್ನು ಸೇರಿ ರಾಜರ ಸಮೂಹದಲ್ಲಿ ಕುಳಿತಿದ್ದ **ವಿಕ್ರಮಾಂಕನನ್ನೇ** ವರಿಸಿ ಆತನ ಕೊರಳಿಗೆ ಮಾಲೆಯನ್ನು ಹಾಕಿದಳು.

**ಜಯಸಿಂಹನ ಅವಿಚಾರ** :— ಇವನ ಮಲತಮ್ಮನಾದ **ಜಯಸಿಂಹ**ನು **ಬನವಾಸಿ** ಪ್ರಾಂತದ ಪ್ರತಿನಿಧಿಯಾಗಿದ್ದನು ಕೆಲದಿನಗಳ ತರುವಾಯ ಜಯಸಿಂಹನು ವಿಕ್ರಮಾಂಕನ ವೈಭವವನ್ನು ಕಂಡು ಹೊಟ್ಟೆಕಿಚ್ಚುಪಡ ಹತ್ತಿದನು. ಮತ್ತು **ಕುಲೋತ್ತುಂಗ** ಮುಂತಾದ ಕೆಲ ಅರಸರ ಸಹಾಯವನ್ನು ಪಡೆದು ದೊಡ್ಡ ದಂಡನ್ನು ಕೂಡಿಸಿಕೊಂಡು ವಿಕ್ರಮಾಂಕನೊಡನೆ ಯುದ್ಧಕ್ಕೆ ಅಣಿಯಾದನು. ಮದ್ದಾನೆಯನ್ನು ಹತ್ತಿ ವಿಲಕ್ಷಣ ಶೌರ್ಯದಿಂದ ಕಾದಿ ವಿಕ್ರಮನು ಆ ಶತ್ರುಗಳೆಲ್ಲರ ಸೈನ್ಯವನ್ನು ನುಗ್ಗುಮಾಡಿ ಜಯಶೀಲನಾದನು. ಜಯಸಿಂಹನು ಅಡವಿಯು ಸೇರಿದನು. ಉಳಿದ ಶತ್ರುಗಳು ದಿಕ್ಕುತಪ್ಪಿ ಓಡಿಹೋದರು.

**ವಿಕ್ರಮಾಂಕನ ಪ್ರಜಾಹಿತದಕ್ಷತೆ** :— ಈತನು ೫೦ ವರ್ಷಗಳ ವರೆಗೆ ಪ್ರಜೆಗಳನ್ನು ಮಕ್ಕಳಂತೆ ಪಾಲಿಸಿದನು ಆದದರಿಂದ ಆ ಕಾಲವು ಪ್ರಜೆಗಳಿಗೆ ಅತಿ ಸುಖಕರವಾಗಿತ್ತು. *ಕಳ್ಳಕಾಕರ ಭಯವಿಲ್ಲದೆ ಇತ್ತು. ಜನರು ಚಿಂತೆಯಿಲ್ಲದೆ ಬಾಳುವೆ ಸಾಗಿಸುತ್ತಿದ್ದರು ಪ್ರಧಾನನಾದ ಪಂಡಿತ **ವಿಜ್ಞಾನೇಶ್ವನು** ಬರೆದ ಪ್ರಸಿದ್ಧವಾದ **ಯಾಜ್ಞವಲ್ಕ್ಯಸ್ಮೃತಿಯ "ಮಿತಾಕ್ಷರಾ"** ಎಂಬ ಟೀಕೆಯು ಆ ಕಾಲದ ಉತ್ತಮ ಕಾಯದೆಗಳ ಸಾಕ್ಷಿಯಾಗಿದೆ. ಈಗ ಬ್ರಿಟಿಷರ ಆಳಿಕೆಯಲ್ಲಿ ಸಹ ಈ ಟೀಕೆಯು ನ್ಯಾಯ ಮಂದಿರಗಳಲ್ಲಿ ಆಧಾರಗ್ರಂಥವೆನಿಸಿದೆ. ಪಾಶ್ಚಾತ್ಯ ಕಾಯದೆ ಪಂಡಿತರು ಈ ಗ್ರಂಥಕ್ಕೆ ಬಹಳ ಮಾನ ಕೊಡುವರು. ಜಗತ್ತಿನಲ್ಲೆಲ್ಲ **ಕಲ್ಯಾಣ ನಗರ**ದಂತಹ ನಗರವೂ

---

* "ಜನರು ರಾತ್ರಿಯಲ್ಲಿ ತಮ್ಮ ಮನೆಯ ಬಾಗಿಲುಗಳನ್ನು ಇಕ್ಕುವ ಗೋಜಿಗೆ ಹೋಗುತ್ತಿರಲಿಲ್ಲ. ಕಳ್ಳರ ಬದಲಾಗಿ ಚಂದ್ರಕಿರಣಗಳು ಮಾತ್ರ ತೆರೆದಿಟ್ಟ ಬಾಗಿಲುಗಳಿಂದ ಮನೆಯನ್ನು ಸೇರುತ್ತಿದ್ದವು' " ಎಂದು ವಿಕ್ರಮಾಂಕ ಚಕ್ರವರ್ತಿಯ ಆಸ್ಥಾನ ಪಂಡಿತನಾದ ಬಿಲ್ಹಣಕವಿಯು ವರ್ಣಿಸಿರುವನು.

**ವಿಕ್ರಮಾಂಕ ಚಕ್ರವರ್ತಿ**ಗೆ ಸಮಾನರಾದ ರಾಜರೂ ದೊರೆಯಲಾರರೆಂದು ವಿಜ್ಞಾನೇಶ್ವರನ ಅಭಿಪ್ರಾಯವು ವಿಕ್ರಮಾಂಕನ ಕಾಲವು ದಕ್ಷಿಣ ವಿಶೇಷ ವಾಗಿ **ಕರ್ನಾಟಕದ "ಸುವರ್ಣ ಯುಗ"** ವೆಂದು ಹೇಳಲು ಸಂಶಯವಿಲ್ಲ.

**ವಿಕ್ರಮಾಂಕನ ಕಾಲದ ವಿದ್ಯೆಯ ಪ್ರಗತಿ:—** ಬಿಲ್ಹಣನೆಂಬ ಹೆಸರಾದ ಸಂಸ್ಕೃತ ಕವಿಯು ಇವನ ಆಶ್ರಯದಲ್ಲಿದ್ದನು. ಈತನ ಮತ್ತು ಈತನ ಮಾಂಡಲಿಕರ ಓಲಗಗಳಲ್ಲಿ **ಕೀರ್ತಿವರ್ಮ, ರಾಜಾದಿತ್ಯ, ಮಲ್ಲಿಕಾರ್ಜುನ ಭಟ್ಟ, ಕರ್ಣರಸ, ಚಂದ್ರ**ರಾಜ ಮೊದಲಾದ ಕನ್ನಡ ಕವಿಗಳು ಪ್ರಸಿದ್ಧಿ ಯನ್ನು ಹೊಂದಿದ್ದರು. ಪ್ರಧಾನಿಯು ಕೂಡ ಹೆಸರಾದ ಪಂಡಿತನಾಗಿದ್ದುದೂ ಆತನಿಂದ ಕಾಯದೆಯ ಗ್ರಂಥವನ್ನು ಬರೆಯಿಸಿದುದೂ ವಿಕ್ರಮಾಂಕನ ವಿದ್ಯಾಪ್ರೇಮದ ದ್ಯೋತಕವಾಗಿದೆ.

**ವಿಕ್ರಮಾಂಕನ ಮರಣ :—** ಈತನು ೫೦ ಕ್ಕಿಂತ ಹೆಚ್ಚು ವಯಸ್ಸಿನವನಿರುವಾಗಲೂ, ದೃಢಕಾಯನೂ, ಸಮರ್ಥನೂ ಆಗಿದ್ದನು. ಅದೇ ಮೂಡಿ ಬೆಳಗಲಾರಂಭಿಸಿದ **ಹೊಯ್ಸಳ ವಿಷ್ಣುವರ್ಧನ**ನ ಆಟವು, ಈ ವಿಕ್ರ ಮಾಂಕನು ಬದುಕಿರುವ ವರೆಗೆ ಮಾತ್ರ ಚಾಳುಕ್ಯರ ಮುಂದೆ ನಡೆಯಲಿಲ್ಲ. ಚಾಳುಕ್ಯರ ಕೀರ್ತಿಸೂರ್ಯನು ಮಧ್ಯಾಹ್ನವನ್ನು ಮುಟ್ಟಿದನು! ಇನ್ನು ಅವನು ಕೆಳಗಿಳಿಯುವದು ಬಿಡದ ಕೆಲಸವಾಗಿತ್ತೋ ಏನೋ!! ವಿಕ್ರ ಮಾಂಕನು ಕ್ರಿ. ಶ. ೧೧೨೬ ರಲ್ಲಿ ಮರಣ ಹೊಂದಿದನು!!!

೨. **೩ನೆಯ ಸೋಮೇಶ್ವರ :—** ವಿಕ್ರಮಾದಿತ್ಯನ ತರುವಾಯ ಅವನ ಮಗ **ಮುಮ್ಮಡಿ ಸೋಮೇಶ್ವರ**ನು ಪಟ್ಟವೇರಿದನು. ತಂದೆಯಂತೆ ಈತನೂ ಶೂರನಾಗಿದ್ದುದಲ್ಲದೆ ಸಕಲಶಾಸ್ತ್ರ ವಿಶಾರದನೂ ಆಗಿದ್ದನು. ಈತನು ಸಂಸ್ಕೃತದಲ್ಲಿ ರಚಿಸಿದ **'ಮಾನಸೊಲ್ಲಾಸ'** ಅಥವಾ **'ಅಭಿಲಷಿತಾರ್ಥ ಚಿಂತಾಮಣಿ'** ಎಂಬ ಗ್ರಂಥದಲ್ಲಿ ರಾಜನೀತಿಶಾಸ್ತ್ರ, ಯುದ್ಧಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ವೈದ್ಯಶಾಸ್ತ್ರ ಮುಂತಾದ ಶಾಸ್ತ್ರಗಳು ವಿವರಿಸಲ್ಪಟ್ಟಿವೆ. ಈತನಿಗೆ **ಸರ್ವಜ್ಞಭೂಪ**ನೆಂದೂ ಎನ್ನುತ್ತಿದ್ದರು. ಈತನು ಹನ್ನೆರಡುವರ್ಷ ರಾಜ್ಯವಾಳಿ ೧೧೩೮ ರಲ್ಲಿ ಮರಣಹೊಂದಿದನು.

**೩. ೩ನೆಯ ತೈಲಪ**:— ೩ನೆಯ ಸೋಮೇಶ್ವರನ ತರುವಾಯ **೨ನೆಯ ಜಗದೇಕಮಲ್ಲನು** ೧೨ ವರ್ಷ ರಾಜ್ಯವಾಳಿದನು. ಬಳಿಕ **೩ನೆಯ ತೈಲಪನು** ಕ್ರಿ. ಶ. ೧೧೫೦ ರಲ್ಲಿ ಪಟ್ಟಕ್ಕೆ ಬಂದನು. ಕಲಚೂರಿ ಮನೆತನದ ಬಿಜ್ಜಳನೆಂಬ ತರ್ದ್ದವಾಡಿ ಎಂದರೆ ವಿಜಾಪುರ ಪ್ರಾಂತದ ಮಾಂಡಲಿಕನು ತೈಲಪನ ದಂಡನಾಯಕನಾದನು. ಈತನು ತೈಲಪನು ಅಸಮರ್ಥನಾಗಿ ರುವದನ್ನು ತಿಳಿದು, ರಾಜ್ಯವನ್ನು ತಾನೇ ಆಕ್ರಮಿಸುವ ಪ್ರಯತ್ನಮಾಡ ಹತ್ತಿದನು.

---

## ೧೪ನೆಯ ಪಾಠ.

### ಕನ್ನಡ ಅರಸು ಮನೆತನಗಳು.

(ಮುಂದೆ ಸಾಗಿದ್ದು)



**೧. ಕಲಚೂರಿ ಮನೆತನ**:- (ಕ್ರಿ. ಶ. ೧೧೫೬-೧೧೮೨) **ಬಿಜ್ಜಳನು ಅರಸನಾದನು**:- ಕ್ರಿ ಶ. ೧೧೫೬-೧೧೬೭. ಸಾಮ್ರಾಜ್ಯವನ್ನು ಆಕ್ರಮಿಸುವ ಕೆಲಸದಲ್ಲಿ ವರಂಗಲ್ಲಿನಲ್ಲಿ ಪ್ರೋಳನೂ ಕೊಲ್ಹಾಪುರದ ವಿಜಯಾರ್ಕನೂ ಬಿಜ್ಜಳನಿಗೆ ಸಹಾಯಕರಾದರು. ಬಿಜ್ಜಳನು ತೈಲಪನನ್ನು ಕಲ್ಯಾಣದಿಂದ ಓಡಿಸಿ ಎಲ್ಲ ರಾಜ್ಯಾಧಿಕಾರಗಳನ್ನು ತನ್ನ ಕೈಯಲ್ಲಿ ತೆಗೆದು ಕೊಂಡನು. ತೈಲಪನು ಅಣ್ಣಿಗೇರಿ (ಧಾರವಾಡ ಜಿಲ್ಹೆ) ಯಲ್ಲಿ ಇದ್ದು ಆ ಭಾಗವನ್ನು ಆಳಹತ್ತಿದನು. ರಾಜ್ಯದಲ್ಲೆಲ್ಲ ತನ್ನ ಅಧಿಕಾರವನ್ನು ನೆಲೆಗೊಳಿಸಿದ ಬಳಿಕ ೧೧೬೨ ರಲ್ಲಿ ತೈಲಪನನ್ನು ಅಣ್ಣಿಗೇರಿಯಿಂದಲೂ ಹೊರದೂಡಿದನು. ಆಗ ತೈಲಪನು ಬನವಾಸಿಗೆ ಹೋಗಿ ಅಲ್ಲಿಯೆ ನಿಂತುಕೊಂಡನು. ಇತ್ತ ಬಿಜ್ಜಳನು ಸ್ವತಂತ್ರ ರಾಜನೆಂದು ಡಂಗುರಸಾರಿಸಿದನು.

**೨. ಬಸವೇಶ್ವರರ ಉದಯ**:— ಬಿಜ್ಜಳನು ಜೈನನು. ಶೈವ ಬ್ರಾಹ್ಮಣನಾದ **ಬಲದೇವನು** ಇವನ ಮಂತ್ರಿಯಾಗಿದ್ದನು. ಬಲದೇವನ ಸೋದರಳಿಯಂದಿರಾದ **ಬಸವೇಶ್ವರರು** ಸಹ ತರ್ದ್ದವಾಡಿ ನಾಡಿನ ಇಂಗಳೇಶ್ವರ - **ಬಾಗೇವಾಡಿ** ಎಂಬ ಗ್ರಾಮದವರು. ಇವರು ಕೃಷ್ಣಾ-ಮಲಪ್ರಭೆ

ಗಳ ಸಂಗಮದಲ್ಲಿರುವ **ಕಪ್ಪಡಿ ಸಂಗಮೇಶ್ವರಕ್ಕೆ** ತಮ್ಮ ವಯಸ್ಸಿನ ೮ನೆಯ ವರ್ಷಕ್ಕೆ ಹೋದರು. ಅಲ್ಲಿ **ಸಂಗಮನಾಥ** ಗುರುಗಳ ಸನ್ನಿಧಿಯಲ್ಲಿ ೧೮ ವರ್ಷಗಳ ವರೆಗೆ ಇದ್ದು, ಶಾಸ್ತ್ರಾಧ್ಯಯನವನ್ನು ಮಾಡಿ, ಗುರ್ವನುಗ್ರಹವನ್ನು ಪಡೆದು, ಭಕ್ತಿ-ಜ್ಞಾನ-ಸದಾಚಾರಗಳಿಂದ ಯುಕ್ತರಾಗಿ ಸತ್ಪುರುಷರೆಂದು



**ವೀರಶೈವ ಮತೋದ್ಧಾರಕರಾದ ಬಸವೇಶ್ವರರು**

ಪ್ರಸಿದ್ಧಿಯನ್ನು ಪಡೆದರು. ಮತ್ತು ಶಿವಾಗಮಗಳ ಉತ್ತರ ಭಾಗಗಳಲ್ಲಿ ನಿರ್ದಿಷ್ಟವಾದ ವೀರಶೈವ ಮತವನ್ನು ಉದ್ಧರಿಸಿದರು. ಬಹು ಜನರು ಈ ಮತವನ್ನು ಸ್ವೀಕರಿಸಿದರು. ಇವರ ಅನೇಕರಾದ ಶಿಷ್ಯರು ಇವರಂತೆ ಉಪ-

ದೇಶದ ಮತಪ್ರಸಾರದ ಕಾರ್ಯವನ್ನು ಕೈಕೊಂಡರು. ಹೀಗಿರುವಲ್ಲಿ ಬಲದೇವ ಮಂತ್ರಿಯು ತನ್ನ ಅಳಿಯನ ಕೀರ್ತಿಯನ್ನು ಕೇಳಿ ಆತನಿಗೆ ತನ್ನ ಮಗಳಾದ **ಗಂಗಾಂಬಿಕೆಯನ್ನು** ಕೊಟ್ಟು ಲಗ್ನಮಾಡುವ ಇಚ್ಛೆಯನ್ನು ಸಂಗಮನಾಥ ಗುರುಗಳಿಗೆ ತಿಳುಹಿದನು. ಬಳಿಕ ಗುರುಗಳ ಅನುಜ್ಞೆಯಂತೆ ಬಲದೇವನು ಅಳಿಯನನ್ನು ಬರಮಾಡಿಕೊಂಡು, ವಿವಾಹ ಮಹೋತ್ಸವವನ್ನು ಸಂಭ್ರಮದಿಂದ ಸಾಂಗಗೊಳಿಸಿದನು.

ಬಳಿಕ ಬಸವೇಶ್ವರರು 'ಸ್ವಕಷ್ಟಾರ್ಜಿತವಾದ ಧನಧಾನ್ಯಗಳೇ ನಿರ್ವಾಹಕ್ಕೆ ತಕ್ಕವು'ಗಳೆಂದು ನೆನೆದು ಬಿಜ್ಜಳ ರಾಜನಲ್ಲಿ ಗುಮಾಸ್ತನ ಕೆಲಸವನ್ನು ಮಾಡಹತ್ತಿದರು ಮುಂದೆ ಕೆಲವು ದಿನಗಳು ಗತಿಸುತ್ತಿರಲು ಒಂದು ದಿನ, ಯಾರಿಗೂ ಓದಲಿಕ್ಕೆಬಾರದ ಒಂದು ಶಾಸನವನ್ನು ಇವರು ಓದಿ, ಚಾಲುಕ್ಯರ ಕಾಲಕ್ಕೆ ಹೂಳಿಟ್ಟಿದ್ದ ಅಪಾರ ಸಂಪತ್ತನ್ನು ಬಿಜ್ಜಳನಿಗೆ ದೊರಕಿಸಿಕೊಟ್ಟರು.

**೩. ಬಸವೇಶ್ವರರು ಮಂತ್ರಿಪದವನ್ನು ಸ್ವೀಕರಿಸಿದ್ದು** :— ಬಲದೇವ ಮಂತ್ರಿಯು ಮರಣಹೊಂದಿದ ಬಳಿಕ, ಬಸವೇಶ್ವರರ ಯೋಗ್ಯತೆಯನ್ನರಿತ ಬಿಜ್ಜಳನು ಅವರನ್ನೇ ಮಂತ್ರಿಪದಕ್ಕೆ ಆರಿಸಿದನು. ಬಸವೇಶ್ವರರು ರಾಜಕಾರಣಪಟುಗಳಾಗಿದ್ದದರಿಂದ ಬಿಜ್ಜಳನ ರಾಜ್ಯವು ಘನತೆಗೇರಿತು. ಮತ್ತು ಬಸವೇಶ್ವರರ ಭಕ್ತಿಮಯ ಆಚರಣೆಯಿಂದಲೂ ಅವರು ಬೋಧಿಸಿದ ಮತತತ್ವಗಳ ಉದಾರತೆಯಿಂದಲೂ ವೀರಶೈವ ಮತಪ್ರಸಾರದ ಕಾರ್ಯವು ಒತ್ತರದಿಂದ ಸಾಗಿತು.

**೪. ಜೈನ-ವೀರಶೈವರಲ್ಲಿಯ ವಿರೋಧ:—** ವೀರಶೈವರ ಧರ್ಮೋಪದೇಶದಿಂದ ಎಷ್ಟೋ ಜೈನರು ಆ ಮತಕ್ಕೆ ಕೂಡಹತ್ತಿದರು ಇದರಿಂದ ಬಿಜ್ಜಳನ ಮನಸ್ಸು ನೊಂದಿತು ಬಿಜ್ಜಳನ ಜೈನ ಉಪಮಂತ್ರಿಯಾದ **ಮಂಚಣ್ಣ**ನು ಬಸವೇಶ್ವರರನ್ನು ದ್ವೇಷಿಸುತ್ತಿದ್ದನು. ಆತನು ಇವರ ವಿರುದ್ಧವಾಗಿ ಇಲ್ಲದ ಚಾಡಿಹೇಳಿ ಬಿಜ್ಜಳನ ಮನಸ್ಸನ್ನು ಮತ್ತಿಷ್ಟು ಕೆಡಿಸಿದನು. ತನ್ನ ಮತಪ್ರಚಾರಕ್ಕಾಗಿ ಬೊಕ್ಕಸದ ಹಣವನ್ನು ಉಪಯೋಗಿಸುವರೆಂಬ ಅಪವಾದವನ್ನು, ಆಗದವರು ಇವರಮೇಲೆ ಹೊರಿಸಿದರು. ಮುಂದೆ ಬಿಜ್ಜಳನು

ವೀರಶೈವ ಭಕ್ತರಲ್ಲಿ ಕೆಲವರ ಕಣ್ಣುಗಳನ್ನು ಕೀಳಿಸಿದ್ದರಿಂದ ಶಾಂತ ಸ್ವಭಾವದ ಬಸವೇಶ್ವರರು ಅಲ್ಲಿ ಇರಲು ಒಪ್ಪದೆ **ಕಪ್ಪಡಿಸಂಗಮಕ್ಕೆ** ಬಂದರು. ಮತ್ತು ಸ್ವಲ್ಪ ದಿವಸಗಳಲ್ಲಿಯೆ ಲಿಂಗೈಕ್ಯರಾದರು.

೫. **ಬಿಜ್ಜಳನ ಕೊಲೆ** :— ವೀರಶೈವರ ಕಣ್ಣುಗಳನ್ನು ಕೀಳಿಸಿದ್ದಕ್ಕಾಗಿ ರೊಚ್ಚಿಗೆದ್ದ ಉಗ್ರಪಕ್ಷದ ಕೆಲವರು ಅರಮನೆಯನ್ನು ಹೊಕ್ಕು ಬಿಜ್ಜಳನನ್ನು ಇರಿದು ಕೊಂದರು. ಮುಂದೆ ಜೈನ-ವೀರಶೈವರಲ್ಲ ಭಯಂಕರವಾದ ಯುದ್ಧವಾಗಿ ರಕ್ತದ ಕಾಲುವೆಗಳು ಹರಿದವು. ಬಿಜ್ಜಳನ ಮಗನಾದ **ರಾಯಮುರಾರಿ ಸೋವಿದೇವನು** ತನ್ನ ತಂದೆಯ ಕೊಲೆಯ ಸೇಡನ್ನು ತೀರಿಸಿಕೊಳ್ಳುವ ಹವಣಿಕೆಯಲ್ಲಿದ್ದನು. ಆದರೆ ಅದು ಸಾಧಿಸದೆ ಕಲಚೂರಿ ಮನೆತನವು ಮಾತ್ರ ಮುಳುಗುವ ಲಕ್ಷಣಗಳು ತೋರಹತ್ತಿದವು. ಮುಂದೆ ಬನವಾಸಿಯಲ್ಲಿ ಆಶ್ರಯಹೊಂದಿದ್ದ ೩ನೆಯ ತೈಲಪನ ಮಗನಾದ **೪ನೆಯ ವೀರಸೋಮೇಶ್ವರನು** ತನ್ನ ತಂದೆಯ ಚಾಳುಕ್ಯ ಸಿಂಹಾಸನವನ್ನು ಮರಳಿ ಕಸಿದುಕೊಂಡನು. ಕ್ರಿ. ಶ. ೧೧೮೩

೬. **ವೀರಶೈವ ಮತದ ಹಬ್ಬುವಿಕೆ:—** ಬಸವೇಶ್ವರರ ತರುವಾಯ **ಅಲ್ಲಮಪ್ರಭು**ಗಳೂ **ಚೆನ್ನಬಸವೇಶ್ವರ**ರೂ ಹಲವು ಶಿವಶರಣರೊಡನೆ ಕಲ್ಯಾಣ ಪಟ್ಟಣದಿಂದ ಹೊರಟು, ಅಲ್ಲಲ್ಲಿ ಧರ್ಮೋಪದೇಶವನ್ನು ಮಾಡುತ್ತಲೂ ಮಠಗಳನ್ನು ಹೆಚ್ಚಿಸುತ್ತಲೂ ಸಾಗಿದರು. ಅಲ್ಲಮಪ್ರಭುಗಳೂ **ಅಕ್ಕಮಹಾದೇವಿ**ಯರೂ ಶ್ರೀಶೈಲಕ್ಕೆ ಹೋಗಿ ಅಲ್ಲಿಯೆ ಸಮಾಧಿಸ್ಥರಾದರು. ಚೆನ್ನಬಸವೇಶ್ವರರು ಮುಂದೆ ಬಹುಕಾಲ, ಬಸವೇಶ್ವರರ ಧರ್ಮಸುಧಾರಣೆಯ ಕಾರ್ಯವನ್ನು ಸಾಗಿಸುತ್ತಿರಲು **ಉಳವಿ** ಕ್ಷೇತ್ರದಲ್ಲಿ ಸಮಾಧಿಯನ್ನು ಹೊಂದಿದರು.

೭. **ವೀರಶೈವ ಮತತತ್ವಗಳು** :— ವೀರಶೈವರು **ಶಕ್ತಿವಿಶಿಷ್ಟಾದ್ವೈತ** ಸಿದ್ಧಾಂತವನ್ನು ನಂಬುವರು. ಶಿವನೇ ಈ ಮತದ ಪರದೈವತವು. ಶುದ್ಧಾಂತಃಕರುಣಿಯಾದ ಜೀವನು ಶಿವನಲ್ಲಿ ಐಕ್ಯವನ್ನು ಹೊಂದುವದು ಈ ಮತದ ಧ್ಯೇಯವು. ಈ ಧ್ಯೇಯದ ಸಿದ್ಧಿಗೆ **ಪಂಚಆಚಾರ**ಗಳು, **ಷಟ್‌ಸ್ಥಲ**ಗಳು, **ಅಷ್ಟಆವರಣ**ಗಳು ಸಾಧನಗಳಾಗಿವೆ.

**೮. ವೀರಶೈವ ಮತದಿಂದ ಸಮಾಜದ ಮೇಲೆ ಆದ ಪರಿಣಾಮ :—** ಸಮಾನತೆಯ ತತ್ವದಿಂದ ಸಮಾಜದಲ್ಲಿ **ಐಕ್ಯವು** ಉಂಟಾಗಲು ಅನುಕೂಲವಾಯಿತು. ಉದ್ಯೋಗ ಭೇದದಿಂದ ಉಂಟಾಗುತ್ತಿದ್ದ ಉಚ್ಚನೀಚ ಭಾವನೆಯು ಬಯಲಾಗಹತ್ತಿತು. ಮಠಸಂಸ್ಥೆಗಳ ಮೂಲಕ ಧರ್ಮಾಧಿಕಾರಿಗಳ ಲಕ್ಷ್ಯವು ಸಮಾಜದ ಮೇಲೆ ಉಳಿದು ಜನರ ಆಚಾರ ವಿಚಾರಗಳು ಸರಿಯಾಗಿರಲು ಮಾರ್ಗವಾಯಿತು. ಕಾಯಕವನ್ನು ಮಾಡಿಯೇ ಪ್ರತಿಯೊಬ್ಬನು ತನ್ನ ನಿರ್ವಾಹವನ್ನು ಸಾಗಿಸತಕ್ಕದ್ದೆಂಬ ನಿಯಮದಿಂದ ಜನರ ಲಕ್ಷ್ಯವು ಉದ್ಯೋಗದ ಕಡೆಗೆ ಹೆಚ್ಚಿಗೆ ಒಲಿಯಿತು. ಧರ್ಮ-ನೀತಿಗಳ ಜ್ಞಾನವು ಜನರಿಗೆಲ್ಲ ಸುಲಭದಿಂದ ಉಂಟಾಗಲೆಂದು ಬಸವೇಶ್ವರರು ಕನ್ನಡ **ವಚನ** ಗ್ರಂಥಗಳಿಗೆ ಪ್ರೋತ್ಸಾಹವನ್ನಿತ್ತುದರಿಂದ ಕನ್ನಡ ವಾಙ್ಮಯಕ್ಕೆ ಕಳೆಯೇರಿತು. ಈ ವಚನ ಗ್ರಂಥಗಳಿಂದ ಕನ್ನಡದಲ್ಲಿ ಸುಂದರವೂ ಪರಿಣಾಮಕರವೂ ಆದ ಗದ್ಯಶೈಲಿಯು ಉಂಟಾಯಿತು.

---

## ೧೫ನೆಯ ಪಾಠ.

### ಕನ್ನಡ ಅರಸು ಮನೆತನಗಳು.

(ಮುಂದೆ ಸಾಗಿದ್ದು)



**೧. ಹೊಯ್ಸಳರು** :— ಈ ಮನೆತನದ ಮೂಲ ಪುರುಷನಾದ **ಸಳ**ನು, ಆಕಸ್ಮಿಕವಾಗಿ ಮೈಮೇಲೆ ಬಂದ ಹುಲಿಯನ್ನು ಹೊಯ್ದು ಕೊಂದದರಿಂದ ಈತನಿಗೆ '**ಹೊಯ್ಸಳ**' ಎಂದು ಹೆಸರುಂಟಾಯಿತು.* 'ಹೊಯ್ಸಳ' ಎಂಬದು ಈ ಮನೆತನದ ಅಡ್ಡ ಹೆಸರು ಆಗಿದ್ದಿತು. ಹೊಯ್ಸಳರು ಯಾದವ ಕುಲದ ಕ್ಷತ್ರಿಯರು. ಕ್ರಿ. ಶ. ೧೧ನೆಯ ಶತಮಾನದ ಆರಂಭದಲ್ಲಿ ಇವರು ಉದಯ ಹೊಂದಿ, ಮೈಸೂರ ಪ್ರಾಂತದ ಮಲೆ ನಾಡಿನಲ್ಲಿ ೧೫೦ ವರ್ಷ ಆಳಿದರು. ಇವರ ಮುಖ್ಯ ರಾಜಧಾನಿಯು **ದ್ವಾರಸಮುದ್ರವು.**

* ಆದರೆ ಈ ಕಥೆಗೆ ತಕ್ಕ ಆಧಾರಗಳಿಲ್ಲ.

ತಳಕಾಡು, ಬಂಕಾಪುರ ಇವರ ಉಪರಾಜಧಾನಿಗಳಾಗಿದ್ದವು. ಇವರು ಕಲ್ಯಾಣ ಚಾಲುಕ್ಯರ ಮಾಂಡಲಿಕರಾಗಿದ್ದರು. ಚಾಲುಕ್ಯ ಸಾಮ್ರಾಜ್ಯವು ನಷ್ಟವಾದ ಬಳಿಕ ಸ್ವತಂತ್ರರಾಗಿ, ಚಾಳುಕ್ಯ ರಾಜ್ಯದ ದಕ್ಷಿಣ ಭಾಗವನ್ನೆಲ್ಲ ಆಕ್ರಮಿಸಿದರು ಈ ಮನೆತನದಲ್ಲಿ **ವಿಷ್ಣುವರ್ಧನ, ವೀರಬಲ್ಲಾಳ** ಎಂಬಿಬ್ಬರು ಅರಸರು ಪ್ರಸಿದ್ಧರಾದರು.

೨. **ವಿಷ್ಣುವರ್ಧನ:**— (ಕ್ರಿ. ಶ. ೧೧೦೬-೧೧೪೧) ಈತನ ಮೊದಲಿನ ಹೆಸರು **ಬಿಟ್ಟಿಗ** (ಬಿಟ್ಟಿದೇವ) ಎಂದು ಇತ್ತು. ಈತನು ಜೈನನಾಗಿದ್ದನು ಕ್ರಿ. ಶ. ೧೧೧೫ರಲ್ಲಿ **ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ** ಮತವನ್ನು ಉದ್ಧರಿಸುವ ಕಾರ್ಯವನ್ನು ಕೈಕೊಂಡರು ಶೈವನಾದ **ಕುಲೊತ್ತುಂಗ ಚೋಳ**ನಿಂದ ಇವರಿಗೆ ತೊಂದರೆಯುಂಟಾಗಲು ಇವರು ಹೊಯ್ಸಳ ರಾಜ್ಯಕ್ಕೆ ಬಂದು ಬಿಟ್ಟಿದೇವನ ಆಶ್ರಯವನ್ನು ಹೊಂದಿದರು. ಇವರ ಉಪದೇಶದಿಂದ ಬಿಟ್ಟಿದೇವನು **ಶ್ರೀ ವೈಷ್ಣವ** ಮತವನ್ನು ಸ್ವೀಕರಿಸಿ '**ವಿಷ್ಣುವರ್ಧನ**' ಎಂಬ ಹೆಸರನ್ನು ಇಟ್ಟುಕೊಂಡನು.

ಈತನು **ಗಂಗವಾಡಿ, ತಳಕಾಡು, ನೊಳಂಬವಾಡಿ** ಮುಂತಾದ ಪ್ರದೇಶಗಳನ್ನು ಗೆಲಿದು ಚಾಳುಕ್ಯರ ರಾಜ್ಯದಲ್ಲಿಯೂ ಕಾಲಿಡಹತ್ತಿದನು ಆಗ ಚಾಳುಕ್ಯರ ೬ನೆಯ ವಿಕ್ರಮಾದಿತ್ಯನು ಈತನನ್ನು ಸೋಲಿಸಲು ಈತನು ಚಾಳುಕ್ಯರ ಒಡೆತನವನ್ನು ಒಪ್ಪಬೇಕಾಯಿತು. ಈತನಿಗೆ **ವೀರಗಂಗ, ವಿಕ್ರಮಗಂಗ,** ಮುಂತಾದ ಬಿರುದುಗಳಿದ್ದವು. **ಜಗದೇಕ**ನೆಂಬವನು ರಾಜಧಾನಿಯಾದ **ಹಳೆಬೀಡು** ಅಥವಾ **ದ್ವಾರಸಮುದ್ರ**ವನ್ನು ಮುತ್ತಿದ್ದನು. ಆಗ ವಿಷ್ಣುವರ್ಧನನು ಮುತ್ತಿಗೆಯನ್ನು ಕಿತ್ತು, ರಾಜಧಾನಿಯನ್ನು ಇಕ್ಕಟ್ಟಿನ ಪ್ರಸಂಗದಿಂದ ಉಳಿಸಿಕೊಂಡನು. ಉತ್ತರಕ್ಕೆ ಮಾಳವದ ವರೆಗೆ ಸಹ ಹೋಗಿದ್ದನು. ಅಷ್ಟರಲ್ಲಿ ಚಾಳುಕ್ಯ ವಿಕ್ರಮಾದಿತ್ಯನು ಮರಣಹೊಂದಿದ್ದರಿಂದ ಚಾಳುಕ್ಯ ರಾಜ್ಯದಲ್ಲಿ ಕಾಲುಚಾಚಲು ಅನುಕೂಲವಾಯಿತು. ಈತನು **ಲಕ್ಷ್ಮೇಶ್ವರ, ಹಲಸಿಗೆ**ಗಳನ್ನು ತಕ್ಕೊಂಡು **ಬಂಕಾಪುರ**ವನ್ನು ಉತ್ತರದ ರಾಜಧಾನಿಯನ್ನು ಮಾಡಿಕೊಂಡು ಅಲ್ಲಿಯೇ ಇರುತ್ತಿರುವಾಗ ಕ್ರಿ. ಶ. ೧೧೪೧ರಲ್ಲಿ ಮರಣಹೊಂದಿದನು.

**೩. ವೀರ ಬಲ್ಲಾಳ**:— (ಕ್ರಿ. ಶ. ೧೧೭೩—೧೨೨೦.) ವಿಷ್ಣುವರ್ಧನನ ತರುವಾಯ **೧ನೆಯ ನರಸಿಂಹ**ನು ಆಳಿದನು ಈ ನರಸಿಂಹನ ಮಗನೇ ಹೊಯ್ಸಳರಲ್ಲಿ ಮಿಗಿಲಾದ **ಇಮ್ಮಡಿ ಬಲ್ಲಾಳ**ನು. ಈತನು ಅತ್ಯಂತ ಪರಾಕ್ರಮಿಯಾಗಿದ್ದುದರಿಂದ **ವೀರ ಬಲ್ಲಾಳ**ನೆಂದೆನಿಸಿಕೊಂಡನು. **ತಂತ್ರಪಾಲ ಹೆಮ್ಮಾಡಿ**ಯು ಈತನ ಮಂತ್ರಿಯೂ **ಬೆಟ್ಟರಸ**ನು ದಂಡಾಧಿಪತಿಯೂ ಆಗಿದ್ದರು. ಇವರೀರ್ವರ ನೆರವಿನಿಂದ ವೀರ ಬಲ್ಲಾಳನು ವಿಜಯಯಾತ್ರೆಯನ್ನಾರಂಭಿಸಿದನು. **ಕೊಂಗಾಳ್ವ, ಚೆಂಗಾಳ್ವ, ಅನ್ಯಮಲೆಪ**ರನ್ನೂ ಪಶ್ಚಿಮ ಘಟ್ಟದಲ್ಲಿ ಮಲೆತಿದ್ದ **ಮಲೆಪ**ರನ್ನೂ ದಳವಾಯಿಗಳು ಸೋಲಿಸಿದರು. ದಕ್ಷಿಣದ ನಾಡು ವಿಸ್ತಾರವನ್ನು ಹೊಂದುತ್ತಿರಲು ಅತ್ತ ಉತ್ತರದಲ್ಲಿ ಸ್ವತಃ ವೀರ ಬಲ್ಲಾಳನೇ ಅತುಲ ಸಾಹಸದಿಂದ ಅನೇಕ ಅರಸರನ್ನು ಸೋಲಿಸಿ ಪ್ರಖ್ಯಾತನಾದನು. **ಚೋಳ**ರು ೧೨ ವರ್ಷ ಮುತ್ತಿಕೊಂಡರೂ ಕೈಸೇರದಿದ್ದ **ಉಚ್ಚಂಗಿ** ದುರ್ಗವೆಂಬ **ಪಾಂಡ್ಯರ** ಅಭೇದ್ಯವಾದ ಕೋಟೆಯೊಂದನ್ನು, ವೀರ ಬಲ್ಲಾಳನು ಲೀಲೆಯಿಂದ ವಶಪಡಿಸಿಕೊಂಡನು. ಆಗ ಪಾಂಡ್ಯ ಅರಸನಾದ **ಕಾಮದೇವ**ನು ಶರಣು ಬಂದದರಿಂದ, ಆತನ ರಾಜ್ಯವನ್ನು ದೊಡ್ಡ ಮನಸ್ಸುಮಾಡಿ ಈತನು ತಿರುಗಿ ಕೊಟ್ಟನು. ಬಳಿಕ **ಗಿರಿದುರ್ಗದ ಕೋಟೆ**ಯನ್ನು ಗೆದ್ದುಕೊಂಡನು.

**ಮಹತ್ವದ ಕ್ರಾಂತಿಕಾಲ**:— ಈ ಸಮಯವು ಕರ್ನಾಟಕದ ಇತಿಹಾಸದಲ್ಲಿಯ ಮಹತ್ವದ ಕ್ರಾಂತಿಕಾಲವು. ಮರಣೋನ್ಮುಖವಾದ ಚಾಲುಕ್ಯ ವಂಶವನ್ನು ಉಳಿಸಿಕೊಳ್ಳುವುದಕ್ಕಾಗಿ ರಾಜನಿಷ್ಠನಾದ, ೩ನೆಯ ಸೋಮೇಶ್ವರನ ಬೊಮ್ಮನೆಂಬ ಸೇನಾಪತಿಯು ಮಾಡಿದ ಸಾಹಸದ ಪ್ರಯತ್ನವು ಸಫಲವಾಗಲಿಲ್ಲ. ಚಾಲುಕ್ಯರ ಪಟ್ಟವನ್ನು ಕಸಿದಿದ್ದ ಕಲಚೂರಿ ಮನೆತನವನ್ನು ಈ ಬೊಮ್ಮನು ಮುರಿದನಾದರೂ ಕೊನೆಗೆ ವೀರಬಲ್ಲಾಳನು ಇವನನ್ನು ಪೂರ್ಣವಾಗಿ ಸೋಲಿಸಿದನು. ಹೀಗಾಗಿ ಕ್ರಿ. ಶ. ೬ ನೆಯ ಶತಮಾನದಿಂದ ೧೨ನೆಯ ಶತಮಾನದ ಅಂತ್ಯದ ವರೆಗೆ ಏಕ ಪ್ರಕಾರವಾಗಿ ಸಾಗುತ್ತ ಬಂದಿದ್ದ ಕರ್ನಾಟಕ-ಸಾಮ್ರಾಜ್ಯವು ಲುಪ್ತವಾಯಿತು. ಕರ್ನಾಟಕ ಸಾಮ್ರಾಜ್ಯವನ್ನು ಸ್ಥಾಪಿಸಿದವರು (ಬದಾಮಿ) ಚಾಳುಕ್ಯರು; ಮುಳುಗಿಸಿದವರು (ಕಲ್ಯಾಣ) ಚಾಳುಕ್ಯರು; ಈ ಎರಡು ಆಳಿಕೆಗಳ ನಡುವಿನ ೨೦೦ ವರ್ಷಗಳ

ಕಾಲವನ್ನು ಸಹ ಸಾಮ್ರಾಜ್ಯ ವೈಭವವನ್ನು ಕುಂದಿಸದೆ, ಕನ್ನಡಿಗರಾದ ರಾಷ್ಟ್ರಕೂಟರೇ ಆಳಿಕೊಂಡು ಬಂದರು. ಆದದರಿಂದಲೇ ಈ ಮೂರು ಆಳಿಕೆಗಳ ೭೦೦ ವರ್ಷಗಳ ಕಾಲಕ್ಕೆ **"ಕರ್ನಾಟಕದ ಅಖಂಡ ಸಾಮ್ರಾಜ್ಯಕಾಲ"** ಎಂಬ ಹೆಸರು ಉಂಟಾಗಿದೆ.

**ಭಿಲ್ಲಮ-ಬಲ್ಲಾಳರ ಕದನ:—** ಚಾಲುಕ್ಯರ ಸಾಮ್ರಾಜ್ಯವನ್ನು ದಕ್ಷಿಣದಿಂದ ವೀರಬಲ್ಲಾಳ ಯಾದವನು ಆಕ್ರಮಿಸುತ್ತ ನಡೆದಂತೆ, ಉತ್ತರದಿಂದ ದೇವಗಿರಿಯ **ಭಿಲ್ಲಮ** ಯಾದವನು ಆಕ್ರಮಿಸುತ್ತ ಸಾಗಿದನು. ಉಭಯ ಸೈನ್ಯಗಳು **ಸೊರಟೂರ** ಹತ್ತಿರ ಒಂದಕ್ಕೊಂದು ಇದಿರಾದವು ಅತಿ ಘೋರ ಸಂಗ್ರಾಮವೆಸಗಿ ಬಲ್ಲಾಳನಿಗೆ ಪೂರ್ಣ ಜಯವು ದೊರೆಯಿತು. ೧೧೯೦. ಮುಂದೆ ೧೧೯೨ರಲ್ಲಿ ಭಿಲ್ಲಮನ ಮಗ **ಜೈತ್ರಸಿಂಹನು** ಸಾಗಿಬರಲು, **ಲಕ್ಕುಂಡಿಯ** ಹತ್ತಿರ ಆತನೂ ಸೋತುಹೋದನು ಬಳಿಕ ಬಲ್ಲಾಳನು ಲಕ್ಕುಂಡಿಯಲ್ಲಿ ಅರಮನೆ, ದೇವಾಲಯಗಳನ್ನು ಕಟ್ಟಿಸಿ ಅದನ್ನು ರಾಜಧಾನಿಯನ್ನು ಮಾಡಿಕೊಂಡನು. ಸಂಗಮದ ವರೆಗೆ ಮಲಪ್ರಭೆಯೂ ಮುಂದೆ ಕೃಷ್ಣೆಯೂ ಇವನ ರಾಜ್ಯದ ಉತ್ತರಮೇರೆಗಳಾದವು.

**ವೀರಬಲ್ಲಾಳನ ಮರಣ:—** ಪ್ರತಾಪಶಾಲಿಯಾದ ಬಲ್ಲಾಳನು ೪೭ ವರ್ಷ ರಾಜ್ಯವನ್ನಾಳಿ ಕ್ರಿ. ಶ. ೧೨೨೦ರಲ್ಲಿ ಮರಣಹೊಂದಿದನು. ಕೂಡಲೆ, ಸ್ವಾಮಿನಿಷ್ಠ ಕುವರಲಕ್ಷ್ಮಣನೂ ಆತನ ಹೆಂಡತಿಯೂ ಬೇರೆ ಒಂದು ಸಾವಿರ ವೀರರೂ ವೀರಬಲ್ಲಾಳನ ಹಿಂದೆ ಬದುಕಿರಲು ಮನಸೊಪ್ಪದೆ ಸಂತೋಷದಿಂದ ಆತ್ಮಹತ್ಯವನ್ನು ಮಾಡಿದರು.

**೪. ಹೊಯ್ಸಳ ಯಾದವರ ಕೊನೆ:—** ವೀರ ಬಲ್ಲಾಳನ ತರುವಾಯ ಅವನ ವಿಸ್ತಾರವಾದ ರಾಜ್ಯವನ್ನು ನಾಲ್ಕೈದು ಜನ ಹೊಯ್ಸಳರು ಬೇರೆಬೇರೆಯಾಗಿ ಆಳಹತ್ತಿದರು. ಕ್ರಿ. ಶ. ೧೩೧೧ರಲ್ಲಿ ಆಳುತ್ತಿದ್ದ ಹೊಯ್ಸಳ ರಾಜನು ದುರ್ಬಲನಿದ್ದುದರಿಂದ, ಈ ರಾಜ್ಯವು ಮಲೀಕ ಕಾಫೂರನ ದಾಳಿಯಿಂದ ಮುಸಲ್ಮಾನರ ಕೈಸೇರಿತು.

---

**ಮಧ್ವಾಚಾರ್ಯರು**:— ಬಸವೇಶ್ವರರ ತರುವಾಯ ಸುಮಾರು ೩೦ ವರ್ಷಕ್ಕೆ ಎಂದರೆ ಕ್ರಿ. ಶ. ೧೧೮೬ ರಲ್ಲಿ **ಮಧ್ವಾಚಾರ್ಯರು** ಉಡುಪಿಯ ಬಳಿಯಲ್ಲಿ ಅವತರಿಸಿ ದ್ವೈತಮತವನ್ನು ಉದ್ಧರಿಸಿದರು. ಇವರು **ಅಚ್ಯುತ ಪ್ರೇಕ್ಷ**ರೆಂಬ ಯತಿಗಳ ಬಳಿಯಲ್ಲಿ ಅಧ್ಯಯನವನ್ನು ಮಾಡಿ, ಸನ್ಯಾಸಾಶ್ರಮಿ ಗಳಾಗಿ ಬ್ರಹ್ಮಸೂತ್ರಗಳಿಗೆ ದ್ವೈತ ಭಾಷ್ಯವನ್ನು ಬರೆದರು. ಕಾಶಿ ಬದರಿ



**ದ್ವೈತಮತೋದ್ಧಾರಕರಾದ ಮಧ್ವಾಚಾರ್ಯರು**

ಮುಂತಾದವುಗಳ ಯಾತ್ರೆಯನ್ನು ಮಾಡಿ, ಎಲ್ಲ ಕಡೆಗೂ ತಮ್ಮ ಮತವನ್ನು ಉಪದೇಶಿಸಲು ಬಹು ಜನರು ಇವರ ಮತಾನುವರ್ತಿಗಳಾದರು. ಉಡುಪಿ ಯಲ್ಲಿ ಇವರು **ಶ್ರೀಕೃಷ್ಣ**ನ ಗುಡಿಯನ್ನು ಕಟ್ಟಿಸಿದರು. ಇವರ ಮತದವರೇ ವೈಷ್ಣವರು. ಇವರನ್ನು **ವಾಯು**ದೇವರ ಅವತಾರವೆಂದು ವೈಷ್ಣವರು ಭಾವಿಸುವರು.

---

# ೧೬ನೆಯ ಪಾಠ.

## ಕನ್ನಡ ಅರಸುಮನೆತನಗಳು. (ಮುಂದೆ ಸಾಗಿದ್ದು)



೧. **ದೇವಗಿರಿಯ ಯಾದವರು**:— ಇವರು ನಾಶಿಕದಿಂದ ದೇವಗಿರಿಯ ವರೆಗೆ ಇರುವ **ಸೇವುಣ** ದೇಶವನ್ನು ಆಳುತ್ತಿದ್ದರು. ರಾಷ್ಟ್ರಕೂಟ ಹಾಗು ಚಾಳುಕ್ಯರ ಮಾಂಡಲಿಕರಾಗಿದ್ದರು. ಈ ಯಾದವರ ಕಾಲದಲ್ಲಿ ಅನೇಕ ಕವಿಗಳೂ ಪಂಡಿತರೂ ಹೆಸರಿಗೆ ಬಂದರು. **ಭಾಸ್ಕರಾಚಾರ್ಯ**ನು ಸಿದ್ಧಾಂತಶಿರೋಮಣಿ ಮತ್ತು ಲೀಲಾವತಿ ಎಂಬ ಗ್ರಂಥಗಳನ್ನು ರಚಿಸಿದನು. **ಶಾರ್ಙ್ಗಧರ**ನು ರತ್ನಾಕರವೆಂಬ ಸಂಗೀತ ಶಾಸ್ತ್ರದ ಗ್ರಂಥವನ್ನು ಬರೆದನು. **ಹೇಮಾದ್ರಿ**ಯು ರಾಮದೇವನ ಮಂತ್ರಿಯೂ ಪಂಡಿತನೂ ಆಗಿದ್ದನು. ಈ ಮನೆತನದಲ್ಲಿ **೫ನೆಯ ಭಿಲ್ಲಮ** ಮತ್ತು **ಸಿಂಘಣ** ಎಂಬಿಬ್ಬರು ಹೆಸರಾದ ಅರಸರಾದರು.

೨. **೫ನೆಯ ಭಿಲ್ಲಮ**ನು :— ( ಕ್ರಿ. ಶ. ೧೧೮೭ ರಿಂದ ೧೧೯೧ ). ಈತನು **ವೀರಬಲ್ಲಾಳ**ನಂತೆ ಶೂರನಾಗಿದ್ದನು. ಚಾಲುಕ್ಯರ ೪ ನೆಯ ಸೋಮೇಶ್ವರನು ದುರ್ಬಲನಾದ್ದರಿಂದ ಆ ರಾಜ್ಯದ ಉತ್ತರ ಭಾಗವನ್ನು ಆಕ್ರಮಿಸಹತ್ತಿದನು. ಚಾಲುಕ್ಯ ರಾಜ್ಯವು ಅಳಿದ ನಂತರ ತನ್ನ ರಾಜ್ಯವನ್ನು ಹಬ್ಬಿಸುತ್ತ ದಕ್ಷಿಣಕ್ಕೆ ಸಾಗಿ, ಸೊರಟೂರ ಬಳಿಯಲ್ಲಿ ವೀರಬಲ್ಲಾಳನಿಗೆ ಇದಿರಾಗಿ, ಪರಾಕ್ರಮದಿಂದ ಕಾದಿ ಯುದ್ಧರಂಗದಲ್ಲಿ ಮಡಿದನು. ಈತನಲ್ಲಿ ೨ ಲಕ್ಷ ಕಾಲಾಳು ಮತ್ತು ೧೨ ಸಾವಿರ ಸವಾರರಿದ್ದರು. ಇಂಥ ಪ್ರಚಂಡ ಸೇನೆಯೊಡನೆ ವೀರಬಲ್ಲಾಳನನ್ನು ತಡೆದು ಅವನನ್ನು ಉತ್ತರಕ್ಕೆ ಮುಂದಡಿಯಿಡಗೊಡಲಿಲ್ಲ. ಭಿಲ್ಲಮ ವೀರನು ರಣದಲ್ಲಿ ಮಡಿದರೂ ಆತನ ಮಗನಾದ **ಜೈತ್ರಸಿಂಹ**ನು ಎದೆಗುಂದದೆ ಮತ್ತೆ ಯುದ್ಧಕ್ಕೆ ಅಣಿಯಾದುದೂ ಬಲ್ಲಾಳನ ರಾಜ್ಯಬೆಳೆಯಿಸುವ ಆಶೆಯು ಮುಂದೆ ಅಷ್ಟಕ್ಕೇ ತಣಿದು ನಿಂತುದೂ ದೇವಗಿರಿ ಯಾದವರ ಧೈರ್ಯ ಪರಾಕ್ರಮಗಳ ಹೆಗ್ಗುರುತಾಗಿದೆ.

೩. **ಸಿಂಘಣರಾಜ**:— (ಕ್ರಿ. ಶ. ೧೨೧೦ ರಿಂದ ೧೨೪೭). ಚೈತ್ರ ಸಿಂಹನ ತರುವಾಯ ಆವನ ಮಗ **ಸಿಂಘಣನು** ಪಟ್ಟವೇರಿದನು: ತನ್ನ ಪರಾಕ್ರಮದಿಂದ ಹೊಯ್ಸಳರ ಉತ್ತರರಾಜ್ಯವನ್ನು ಗೆದ್ದುಕೊಂಡು, ಬೀಚಣ್ಣ ನೆಂಬ ಶೂರನನ್ನು ಆ ಭಾಗದ ಅಧಿಕಾರಿಯನ್ನಾಗಿ ನಿಯಮಿಸಿದನು. ಈ ಬೀಚಣ್ಣನು ಸವದತ್ತಿ, ಗೋವೆ, ಉಚ್ಚಂಗಿ, ಗುತ್ತಲ ಮತ್ತು ದ್ವಾರ ಸಮುದ್ರಗಳ ಅರಸರನ್ನು ಬಗ್ಗುಬಡಿದು, ಕಾವೇರಿಯವರೆಗೆ ಸಾಗಿ ಅಲ್ಲೊಂದು ದೊಡ್ಡ ಜಯಸ್ತಂಭವನ್ನು ನಿಲ್ಲಿಸಿದನು. ಕ್ರಿ ಶ. ೧೨೩೮. ಸಿಂಘಣನು ಪರಮಾರರ ೨ನೆಯ ಅರ್ಜುನನನ್ನು ಸೋಲಿಸಿ, ಗೋದಾವರಿಯ ಆಚೆಗೆ ನರ್ಮದೆಯ ವರೆಗೆ ರಾಜ್ಯವನ್ನು ಗಳಿಸಿದನು. ಗುಜರಾಥವನ್ನು ನುಗ್ಗಿ ಆ ಅರಸನಿಂದ ಕಪ್ಪಕಾಣಿಕೆಗಳನ್ನು ತಕ್ಕೊಳ್ಳಹತ್ತಿದನು.

೪. **ದೇವಗಿರಿ ಯಾದವರ ಕಡೆ**:—ಸಿಂಘಣನ ತರುವಾಯ ಇಬ್ಬರು ಅರಸರು ನಿಶ್ಚಿಂತೆಯಿಂದ ಆಳಿದರು. ಬಳಿಕ ರಾಮದೇವನ ಆಳಿಕೆಯಲ್ಲಿ ದಿಲ್ಲಿಯ ಸುಲ್ತಾನನಾದ ಜಲಾಲುದ್ದೀನ ಖಿಲಜಿಯ ಅಣ್ಣನ ಮಗನಾದ **ಅಲ್ಲಾ ಉದ್ದೀನ** ಖಿಲಜಿಯು ದಕ್ಷಿಣವನ್ನು ಹೊಕ್ಕು, ದೇವಗಿರಿಯನ್ನು ವಶ ಮಾಡಿಕೊಂಡನು. ರಾಮದೇವನು ಅಪಾರ ದ್ರವ್ಯವನ್ನು ಕೊಟ್ಟು ಮುಸಲ್ಮಾನರ ಅಧೀನನಾಗಿ ನಡೆಯಹತ್ತಿದನು. ಆದರೆ ಮುಂದೆ ಶಂಕರದೇವನು ಆಳುವಾಗ ಅಲ್ಲಾಉದ್ದೀನನ ಸೇನಾಪತಿಯಾದ **ಮಲಿಕಕಾಫೂರನು** ದೇವಗಿರಿಯ ರಾಜ್ಯವನ್ನು ಸಂಪೂರ್ಣವಾಗಿ ತಕ್ಕೊಂಡನು. ಯಾದವ ಮನೆತನವು ಶೂನ್ಯವಾಯಿತು!

೫. **ಕನ್ನಡಿಗರ ಆಳಿಕೆಯ ಕಾಲದ ಸಿಂಹಾವಲೋಕನ**:— **ರಾಜ್ಯ ವ್ಯವಸ್ಥೆ**:— ರಾಜ್ಯದಲ್ಲಿ ಅರಸರೇ ಮುಖ್ಯರಾಗಿದ್ದರು. ಮಂತ್ರಿ, ಉಪಮಂತ್ರಿ, ದಳವಾಯಿ, ಸಂಧಿವಿಗ್ರಹಿ ಮೊದಲಾದ ಅಧಿಕಾರಿಗಳು ಅರಸನ ಅಪ್ಪಣೆಗೆ ಒಳಗಾಗಿ ನಡೆಯುತ್ತಿದ್ದರು. ರಾಜ್ಯದ ಮುಖ್ಯ ಭಾಗಗಳ ವ್ಯವಸ್ಥೆಯನ್ನು ರಾಜಮನೆತನಕ್ಕೆ ಹೊಂದಿದ ಪುರುಷರು ಅಥವಾ ಸ್ತ್ರೀಯರು ನೋಡುತ್ತಿದ್ದರು. ಗ್ರಾಮಗಳಲ್ಲಿ ಗೌಡರೇ ಮುಖ್ಯರು. 'ಮಹಾಜನ' ಎಂಬ ಊರ ಪ್ರಮುಖ ಸಂಸ್ಥೆಗೆ ಕೆಲವು ಅಧಿಕಾರಗಳು ಇರುತ್ತಿದ್ದವು. ಅರಸರು ಸ್ವತಃ ಯುದ್ಧಕ್ಕೆ ಹೋಗುವರಲ್ಲದೆ, ಸಂಗಡ ಪ್ರಸಂಗದಲ್ಲಿ ಸ್ತ್ರೀಯರನ್ನೂ ಕರೆದೊಯ್ಯುತ್ತಿದ್ದರು.

ಭೂಮಿಯ ಉತ್ಪನ್ನದ ಆರರಲ್ಲೊಂದು ಪಾಲನ್ನು ಕಂದಾಯವೆಂದು ಕೊಡ ಬೇಕಾಗುತ್ತಿತ್ತು. ಸೈನ್ಯದಲ್ಲಿ ಸೇರುವ ಒತ್ತಾಯವಿದ್ದಿಲ್ಲ.

**ಧಾರ್ಮಿಕ ಸ್ಥಿತಿ** :— ಬೌದ್ಧಧರ್ಮವು ಕರ್ನಾಟಕದಲ್ಲಿ ವಿಶೇಷವಾಗಿ ಹಬ್ಬಲಿಲ್ಲ. ಜೈನರಿಗೆ ಮಾತ್ರ ರಾಜಾಶ್ರಯವು ದೊರೆತದರಿಂದ ಆ ಧರ್ಮವು ಹಬ್ಬಿಗೊಂಡಿತು. ಶಂಕರಾಚಾರ್ಯರ ಹಿಂದುಧರ್ಮ ಜಾಗ್ರತೆಯ ಕಾರ್ಯ ದಿಂದ ಜೈನಧರ್ಮದ ಹಬ್ಬುವಿಕೆಯು ನಿಂತಿತು. ಬೌದ್ಧಧರ್ಮವು ಹೆಸರಿಲ್ಲ ದಂತಾಯಿತು. ಮುಂದೆ **ವಿಶಿಷ್ಟಾದ್ವೈತ, ವೀರಶೈವ** ಮತ್ತು **ದ್ವೈತ** ಮತಗಳ ಸ್ಥಾಪಕರು ತಮ್ಮ ಧರ್ಮದ ಪ್ರಸಾರವನ್ನು ಕರ್ನಾಟಕ ಭಾಗದಲ್ಲಿ ಹೆಚ್ಚಾಗಿ ಮಾಡಿದರು. ಅರಸರು ಯಾವ ಧರ್ಮದವರಿದ್ದರೂ ಉಳಿದ ಧರ್ಮದವರೊ ಡನೆ ಸಹಿಷ್ಣುತೆಯಿಂದಲೇ ನಡೆಯುತ್ತಿದ್ದರು. ಶೈವ-ವೈಷ್ಣವರಲ್ಲಿ ಜಗಳಗಳಾ ಗುತ್ತಿದ್ದರೂ ಕೂಡಲೆ ಅವನ್ನು ಅಡಗಿಸುವ ಪ್ರಯತ್ನವನ್ನು ಅರಸರೂ ಸಮಾಜಧುರೀಣರೂ ಮಾಡುತ್ತಿದ್ದರೆಂದು ಕಾಣುತ್ತದೆ. ಸಹಗಮನವು ರೂಢಿಯಲ್ಲಿತ್ತು.

**ಶಿಲ್ಪಕಲೆ**:— ಕರ್ನಾಟಕದಲ್ಲಿ ಅಲೌಕಿಕ ಸೌಂದರ್ಯವುಳ್ಳ ಪ್ರಾಚೀನ ಕಾಲದ ಕಟ್ಟಡಗಳು, ಕಲ್ಮನೆಗಳು, ಗವಿಗಳು ಮತ್ತು ಮೂರ್ತಿಗಳು ಅನೇಕ ವಾಗಿರುವವು. ಈ ಕಟ್ಟಡಗಳಲ್ಲಿ ಚಾಲುಕ್ಯ ಹೊಯ್ಸಳ ಮತ್ತು ಹೇಮಾದ್ರಿ ಎಂಬ ಮೂರು ತರಹದ ಕಟ್ಟುವ ಮಾದರಿಗಳುಂಟು. ಜಕ್ಕಣಾಚಾರ್ಯರು ಧರ್ಮನಿಷ್ಠರಿದ್ದುದಲ್ಲದೆ ವಾಸ್ತುಶಾಸ್ತ್ರ, ಶಿಲ್ಪಕಲೆಗಳನ್ನು ಚೆನ್ನಾಗಿ ಬಲ್ಲವರಾಗಿ ದ್ದರು. ಆ ಕಾಲದ ಶಿಲ್ಪಿಗರು ತೋರಿಸಿರುವ ಜಾಣ್ಮೆಯು ಜಗತ್ತಿನಲ್ಲಿ ಮಿಗಿ ಲಾದದ್ದೆಂದು ತಜ್ಞರ ಮತವಿದೆ.

**ಸಾಹಿತ್ಯದ ಪ್ರಗತಿ** :— ಕನ್ನಡ ವಾಙ್ಮಯವು ಹೆಚ್ಚು ಏಳ್ಗೆಯನ್ನು ಹೊಂದಿತು. ಕವಿತೆಗಳಿಗೆ ಬಹುತರ ರಾಜಾಶ್ರಯವು ದೊರೆಯುತ್ತಿತ್ತು. ಎಷ್ಟೋ ಅರಸರೇ ಕವಿಗಳಾಗಿದ್ದು ಮಾನ್ಯವಾದ ಗ್ರಂಥಗಳನ್ನು ರಚಿಸಿ ಭಾಷಾಸೇವೆ ಯನ್ನು ಮಾಡಿರುವರು. ಆ ಕಾಲದಲ್ಲಿ ಜೈನ ಮತ್ತು ವೀರಶೈವ ಕವಿಗಳೇ ವಿಶೇಷವಾಗಿ ಪ್ರಸಿದ್ಧರಾದರು. ವ್ಯಾಕರಣ, ಅಲಂಕಾರ, ಜ್ಯೋತಿಷ, ಗಣಿತ,

ಸಂಗೀತ ಮುಂತಾದ ವಿಷಯಗಳ ಸಂಬಂಧವಾದ ಗ್ರಂಥಗಳೂ ರಚಿಸಲ್ಪಟ್ಟವು. ೬ನೆಯ ಶತಕದಿಂದ ಕನ್ನಡ * ಕಲ್ಬರೆಹಗಳು ಬರೆಯಲ್ಪಡಹತ್ತಿದವು. ಭಾರತೀಯರ ಸಂಸ್ಕೃತಿಯನ್ನು ಜಲಮಾರ್ಗವಾಗಿ ಹೊರದೇಶಗಳಲ್ಲಿ ಪ್ರಸಾರಗೊಳಿಸುವ ಕಾರ್ಯದಲ್ಲಿ ಕನ್ನಡಿಗರು ಹಿಂದುಳಿದಿರಲಿಲ್ಲ. ಕನ್ನಡ ಅರಸರು ಕನ್ನಡದ ಜೊತೆಗೆ ಸಂಸ್ಕೃತಕ್ಕೂ ತಕ್ಕಷ್ಟು ಆಶ್ರಯವನ್ನು ಕೊಟ್ಟಿದ್ದರು. ಇಷ್ಟೇ ಅಲ್ಲ, ಹೊಸದಾಗಿ ತಲೆಯೆತ್ತಲಾರಂಭಿಸಿದ್ದ ಮರಾಠಿ ಭಾಷೆಗೂ ದೇವಗಿರಿಯ ಯಾದವರ ಕಾಲಕ್ಕೆ ಉತ್ತೇಜನವು ಸಿಕ್ಕಿತು. ಭಗವದ್ಗೀತೆಯ ಟೀಕಾಗ್ರಂಥವಾದ **ಜ್ಞಾನೇಶ್ವರಿಯು** ಯಾದವರ ಕಾಲದ ಮರಾಠಿಯಲ್ಲಿಯ ಶ್ರೇಷ್ಠ ಗ್ರಂಥವು. ಕೈಬರೆಹಕ್ಕೆ ಹೆಚ್ಚು ಅನುಕೂಲವಾದ 'ಮೋಡೀ' ಲಿಪಿಯು ಯಾದವರ ಕಾಲದಲ್ಲಿಯೇ ಮರಾಠಿಗರಲ್ಲಿ ಪ್ರಚಾರಗೊಂಡಿತು. ಆ ಲಿಪಿಯು ಸಿಂಹಳದ್ವೀಪದಿಂದ ಬಂದಿತೆಂದು ಹೇಳುವರು. ಹೀಗೆ ಎಲ್ಲ ವಿದ್ಯೆ-ಕಲೆ-ಶಾಸ್ತ್ರಗಳು ಒಳ್ಳೆಯ ಸುಸ್ಥಿತಿಯಲ್ಲಿದ್ದು ಜನರು ಸುಖ-ಸಂಪತ್ತುಗಳಿಂದ ಮೆರೆಯುತ್ತಿದ್ದರು!

# ೧೭ನೆಯ ಪಾಠ.

## ಪ್ರಾಚೀನ ಕಾಲದ ದಕ್ಷಿಣ ಹಿಂದುಸ್ಥಾನದ ಉಳಿದ ರಾಜ್ಯಗಳು.



೧. **ದ್ರಾವಿಡರು ದಕ್ಷಿಣದಲ್ಲಿ ನೆಲೆಸಿದ್ದು**:— ಉತ್ತರ ಹಿಂದುಸ್ಥಾನವನ್ನು ಆರ್ಯರು ವ್ಯಾಪಿಸುತ್ತ ಬಂದಂತೆ, **ದ್ರಾವಿಡರು** ದಕ್ಷಿಣಕ್ಕೆ ಸರಿಯಹತ್ತಿದರು. ಇವರು ದಕ್ಷಿಣ ಹಿಂದುಸ್ಥಾನದ ದಕ್ಷಿಣದ ಕಡೆಯವರೆಗೂ ವ್ಯಾಪಿಸಿ ಅಲ್ಲಿ ಸ್ಥಿರಗೊಂಡು, ತಮ **ಭಾಷೆ-ಆಚಾರ-ವಿಚಾರ**ಗಳನ್ನು ಚೆನ್ನಾಗಿ ಸುಧಾರಿಸಿಕೊಂಡು ಇರಹತ್ತಿದರು. ದಕ್ಷಿಣದ ತುದಿಗೆ ಪಾಂಡ್ಯರು, ಮಲಬಾರದಲ್ಲಿ ಚೇರರು, ಕಾವೇರಿಯ ನೆರೆಯಲ್ಲಿ ಚೋಳರು ತಮ್ಮ ತಮ್ಮ ರಾಜ್ಯವನ್ನು

* ಕ್ರಿ. ಶ. ೧೯೯ ರಲ್ಲಿಯ ಶಿಲಾಲೇಖವೊಂದು ಇತ್ತೀಚೆಯಲ್ಲಿ ದೊರೆತಿದೆ.

ಸ್ಥಾಪಿಸಿಕೊಂಡು ವೈಭವದಿಂದ ಆಳುತ್ತಿದ್ದರು. **ಮೇಗ್ಯಾಸ್ಥಿನೀಸ,** ಅಶೋಕ ಹಾಗೂ ಬೇರೆ ಗ್ರೀಕ-ರೋಮನ್ ಗ್ರಂಥ ಕರ್ತರು ಈ ದ್ರಾವಿಡ ರಾಜ್ಯಗಳನ್ನು ಉಲ್ಲೇಖಿಸಿರುವರು. ಕಾರಣ, ಈ ರಾಜ್ಯಗಳು ಅತಿ ಪ್ರಾಚೀನ ಕಾಲದಿಂದ ನಡೆದುಬಂದಿವೆ ಎಂದು ತಿಳಿಯಲು ಅಡ್ಡಿಯಿಲ್ಲ. ಕ್ರಿ. ಶ. ಪೂ ೧೦೦೦ ವರ್ಷದ ಆಚೆಯಿಂದಲೂ ದ್ರಾವಿಡರು ಸಮುದ್ರಮಾರ್ಗವಾಗಿ ವ್ಯಾಪಾರವನ್ನು ಮಾಡುತ್ತಿದ್ದರು. ಮತ್ತು ಪಾಶ್ಚಿಮಾತ್ಯರೊಡನೆ ವ್ಯವಹಾರ ಸಂಬಂಧವನ್ನು ಹೆಚ್ಚಾಗಿ ಬೆಳೆಸಿದ್ದರು. ರೋಮನ್ನರ ನಾಣ್ಯಗಳು ದಕ್ಷಿಣ ಹಿಂದುಸ್ಥಾನದಲ್ಲಿ ಬಹಳವಾಗಿ ದೊರೆತಿವೆ. ಇದರಿಂದ ರೋಮ ಸಾಮ್ರಾಜ್ಯದ ಉತ್ಕರ್ಷಕಾಲದಲ್ಲಿ ದ್ರಾವಿಡ ರಾಜ್ಯಗಳೊಡನೆ ವ್ಯಾಪಾರಮಾಡುವದು ರೋಮಾಯರಿಗೆ ಆಗತ್ಯವಿರಬೇಕೆಂದು ತೋರುತ್ತದೆ.

೨. **ಪ್ರಾಚೀನ ಚೋಳರು :— ಕರಿಕಾಲ**ನೆಂಬ ಚೋಳರಾಜನು ಹಿಮಾಲಯದ ವರೆಗೆ ರಾಜ್ಯವನ್ನು ಬೆಳೆಯಿಸಿ, ಸಾರ್ವಭೌಮನಾಗಿ **ಆಳಿದ**ನೆಂದು ಪ್ರಾಚೀನ ತಮಿಳು ಗ್ರಂಥಗಳಲ್ಲಿ ಉಲ್ಲೇಖವಿದೆ. ಕ್ರಿ. ಶ. ಪೂ. ೩ನೆಯ ಶತಕದಲ್ಲಿ ಇವರು ಸಿಂಹಳದ್ವೀಪದ ಮೇಲೆ ದಂಡೆತ್ತಿಹೋದರು. ಕ್ರಿ. ಶ. ೧ನೆಯ ಶತಕದಲ್ಲಿ ಸಿಂಹಳರು ಚೋಳರ ಮೇಲೆ ಸಾಗಿಬಂದಿದ್ದರು.

ಬಳಿಕ ಕ್ರಿ. ಶ. ೯೮೫ರಿಂದ **ರಾಜರಾಜ**ನೆಂಬ ಪ್ರಸಿದ್ಧನಾದ ಅರಸನು ಆಳಲಾರಂಭಿಸಿದನು. ದಕ್ಷಿಣ ಹಿಂದುಸ್ಥಾನವನ್ನೆಲ್ಲ ಗೆದ್ದನು. ಮಲಬಾರದ ಹಡಗುಪಡೆಯನ್ನು ನುಗ್ಗುಮಾಡಿ **ಚೇರ**ರನ್ನು ಮೆತ್ತಗೆ ಮಾಡಿದನು. ರಾಜಧಾನಿಯಾದ **ತಂಜಾವರ**ದಲ್ಲಿಯ ಪ್ರಸಿದ್ಧವಾದ ಗುಡಿಯನ್ನು ಇವನೇ ಕಟ್ಟಿಸಿದನು. ಇವನ ಮಗ **೧ನೆಯ ರಾಜೇಂದ್ರ**ನು ತನ್ನ ರಾಜ್ಯವನ್ನು ಮತ್ತೆ ಬೆಳೆಸಿ ಸಾರ್ವಭೌಮ ಎನಿಸಿದನು. ಈತನ ಹಡಗುಪಡೆಯು **ನಿಕೋಬಾರ-ಮಲಯ** ದ್ವೀಪಗಳನ್ನು ತಕ್ಕೊಂಡಿತು. ಉತ್ತರಕ್ಕೆ ಸಾಗಿ ಮಧ್ಯಪ್ರಾಂತ, ಒಡಿಸಾ ಮತ್ತು ಅಪರಾಂತಕಗಳನ್ನು ಗೆದ್ದುಕೊಂಡನು. ಇವನ ತರುವಾಯ ಇವನ ಇಬ್ಬರು ಮಕ್ಕಳೂ ಒಬ್ಬರ ಹಿಂದೊಬ್ಬರು ಚೆನ್ನಾಗಿ ಆಳಿದರು. ವೀರ ಬಲ್ಲಾಳನು ಚೋಳರನ್ನು ಕಾಡಿದನು. ಮುಂದೆ ಮುಸಲ್ಮಾನರ ಬರುವಿಕೆಯಿಂದ ಈ ರಾಜ್ಯವು ಬಲಗುಂದಿ ಮುಳುಗಿತು.

೩. **ಕಂಚಿಯ ಪಲ್ಲವರು :—** ಕ್ರಿ. ಶ. ೨ನೆಯ ಶತಮಾನದಿಂದ **ಪಲ್ಲವರು ಕಂಚಿ**ಯಲ್ಲಿ ಆಳುತ್ತಿದ್ದರು. ಇವರು ೫ನೆಯ ಶತಮಾನದಲ್ಲಿ ಪಶ್ಚಿಮೋತ್ತರ ದಿಕ್ಕುಗಳಲ್ಲಿ ಹಬ್ಬಿ ಪ್ರಬಲರಾದರು. ಇವರ ವಶದಲ್ಲಿಯೇ ಇದ್ದ ಬಾದಾಮಿಯನ್ನು ಚಾಲುಕ್ಯರು ಕಸಿದುಕೊಂಡರು. ೨ನೆಯ ಪುಲಿಕೇಶಿಯು ಪಲ್ಲವರ **೧ನೆಯ ಮಹೇಂದ್ರವರ್ಮ**ನಿಂದ ವೆಂಗಿ ಪ್ರಾಂತವನ್ನು ತಕ್ಕೊಂಡನು. ಮುಂದೆ ರಾಷ್ಟ್ರಕೂಟರೂ ಗಂಗರೂ ಇವರನ್ನು ಹಣ್ಣುಮಾಡಿದರು. ಈ ರಾಜ್ಯವು ಮುರಿದು ಕಂಚಿಯು **ಚೋಳ**ರ ಕೈಸೇರಿತು

೪. **ಮಧುರೆಯ ಪಾಂಡ್ಯರು** :— ಸಿಂಹಳಿಯರಿಗೂ ಪಾಂಡ್ಯರಿಗೂ ಮೇಲಿಂದಮೇಲೆ ಕದನಗಳಾಗುತ್ತಿದ್ದವು ಮುಂದೆ ಪಾಂಡ್ಯ, ಚೋಳರಿಬ್ಬರು ಕೂಡಿ ಸಿಂಹಳಿಯರನ್ನು ಹಿಂದಕ್ಕೆ ಅಟ್ಟಿದರು. ತರುವಾಯ ಪಾಂಡ್ಯರೇ ಸಮರ್ಥರಾಗಿ ಚೋಳರಾಜ್ಯವನ್ನು ಸೆಳೆಯಹತ್ತಿದರು. ಪಾಂಡ್ಯರಾಜರಲ್ಲಿ **ಸುಂದರರಾಜ**ನು ಪ್ರಸಿದ್ಧನು. ಇವನು ಸಿಂಹಳದ್ವೀಪವನ್ನು ಗೆದ್ದನು. **ಮಧುರೆ**ಯಲ್ಲಿಯ ಹಲವು ಸುಂದರವಾದ ದೇವಾಲಯಗಳು ಪಾಂಡ್ಯರಿಂದ ಕಟ್ಟಲ್ಪಟ್ಟವು. ವೇನೀಸದ ಪ್ರವಾಸಿಯಾದ **ಮಾರ್ಕೋಪೋಲೋ** ಎಂಬವನು ಕ್ರಿ. ಶ. ೧೨೮೮ ರಲ್ಲಿ ಈ ದೇಶಕ್ಕೆ ಬಂದಿದ್ದನು. ಆತನು ಪಾಂಡ್ಯರ ರಾಜ್ಯವು ಒಳ್ಳೇ ಘನತೆಯನ್ನು ಪಡೆದಿತ್ತೆಂದು ಬರೆದಿಟ್ಟಿರುವನು. ಈ ರಾಜ್ಯವಾದರೂ ಮುಂದೆ ಮುಸಲ್ಮಾನರ ಕೈವಶವಾಯಿತು.

---

### ಪ್ರಾಚೀನ ಕಾಲದಲ್ಲಿ ಆಳಿದ

## ಪ್ರಸಿದ್ಧವಾದ ರಾಜವಂಶಗಳು.

**ಮೌರ್ಯವಂಶ** (ಕ್ರಿ. ಶ. ಪೂ. ೩೨೧ ಕ್ರಿ. ಶ. ಪೂ. ೧೮೪)

| | | | |
|---|---|---|---|
| ೧ | ಚಂದ್ರಗುಪ್ತ | ಕ್ರಿ. ಶ. ಪೂ. ೩೨೧ | ಕ್ರಿ. ಶ. ಪೂ. ೨೯೮. |
| ೨ | ಬಿಂದುಸಾರ | ,, ೨೯೮ | ,, ೨೭೩. |
| ೩ | ಅಶೋಕ | ,, ೨೭೪ | ,, ೨೩೭. |
| ೪ | ಉಳಿದ ಅರಸರು | ,, ೨೩೭ | ,, ೧೮೪. |

## **ಗುಪ್ತ ವಂಶ** (ಕ್ರಿ. ಶ. ೩೨೦ ರಿಂದ ೬೦೦).

| | | | |
|---|---|---|---|
| ೧ | ಚಂದ್ರಗುಪ್ತ | ಕ್ರಿ. ಶ. | ೩೨೦—೩೩೦. |
| ೨ | ಸಮುದ್ರಗುಪ್ತ | ,, | ೩೩೦—೩೨೫. |
| ೩ | ೨ನೆಯ ಚಂದ್ರಗುಪ್ತ | ,, | ೩೭೫—೪೧೩. |
| ೪ | ಕುಮಾರಗುಪ್ತ | ,, | ೪೧೩—೪೫೫. |
| ೫ | ಸ್ಕಂದಗುಪ್ತ | ,, | ೪೫೫—೪೮೦. |
| ೬ | ಉಳಿದ ಅರಸರು | ,, | ೪೮೦—೬೦೦. |

## **ಬಾದಾಮಿಯ ಚಾಲುಕ್ಯ ವಂಶ** (ಕ್ರಿ. ಶ. ೫೦೦ ರಿಂದ ೭೫೦).

| | | | |
|---|---|---|---|
| ೧ | ಜಯಸಿಂಹ ಮತ್ತು ರಣರಾಗ | ಕ್ರಿ. ಶ. | ೫೦೦—೫೫೦. |
| ೨ | ೧ನೆಯ ಪುಲಿಕೇಶಿ | ,, | ೫೫೦—೫೬೬. |
| ೩ | ಕೀರ್ತಿವರ್ಮ ಮತ್ತು ಮಂಗಳೇಶ | ,, | ೫೬೬—೬೦೮. |
| ೪ | ೨ನೆಯ ಪುಲಿಕೇಶಿ | ,, | ೬೦೯—೬೪೨. |
| ೫ | ವಿಕ್ರಮಾದಿತ್ಯ | ,, | ೬೪೨—೬೮೦. |
| ೬ | ಉಳಿದ ಅರಸರು | ,, | ೬೮೦—೭೫೦. |

## **ರಾಷ್ಟ್ರಕೂಟ ವಂಶ** (ಕ್ರಿ ಶ. ೭೫೦ ರಿಂದ ೯೭೩).

| | | | |
|---|---|---|---|
| ೧ | ದಂತಿದುರ್ಗ | ಕ್ರಿ. ಶ. | ೭೫೦—೭೬೦. |
| ೨ | ೧ನೆಯ ಕೃಷ್ಣ | ,, | ೭೬೦—೭೭೯. |
| ೩ | ೨ನೆಯ ಗೋವಿಂದ ಮತ್ತು ಧ್ರುವ | ,, | ೭೭೯—೭೯೪. |
| ೩ | ೨ನೆಯ ಗೋವಿಂದ ಮತ್ತು ಧ್ರುವ | ,, | ೭೭೯—೭೯೪. |
| ೪ | ೩ನೆಯ ಗೋವಿಂದ | ,, | ೭೯೪—೮೧೪. |
| ೫ | ೧ನೆಯ ಅಮೋಘವರ್ಷ | ,, | ೮೧೪—೮೭೭. |
| ೬ | ಇಮ್ಮಡಿಕೃಷ್ಣ ಮುಂತಾದ ಉಳಿದ ಅರಸರು | ,, | ೮೭೭—೯೭೩. |

## ಪಶ್ಚಿಮ ಚಾಲುಕ್ಯರು (ಕ್ರಿ. ಶ. ೯೭೩ ರಿಂದ ೧೧೮೯).

| | | | |
|---|---|---|---|
| ೧ | ನೂರ್ಮಡಿ ತೈಲಪ | ಕ್ರಿ. ಶ. | ೯೭೩—೯೯೭. |
| ೨ | ಇರಿವಬೆಡಂಗ ಮುಂತಾದ ಮೂವರು | ,, | ೯೯೭—೧೦೪೨. |
| ೩ | ೧ನೆಯ ಸೋಮೇಶ್ವರ | ,, | ೧೦೪೨—೧೦೬೮. |
| ೪ | ೨ನೆಯ ಸೋಮೇಶ್ವರ | ,, | ೧೦೬೮—೧೦೭೬. |
| ೫ | ವಿಕ್ರಮಾದಿತ್ಯ | ,, | ೧೦೭೬—೧೧೨೭. |
| ೬ | ೩ನೆಯ ಸೋಮೇಶ್ವರ | ,, | ೧೧೨೭—೧೧೩೮. |
| ೭ | ಉಳಿದ ಅರಸರು | ,, | ೧೧೩೮—೧೧೮೯. |



## ಮಹತ್ವದ ಸಂಗತಿಗಳ ಕಾಲಗಳು

| | | | |
|---|---|---|---|
| ೧ | ಮಿನಾಂಡರನ ಆಳಿಕೆ | ಕ್ರಿ. ಶ. ಪೂ. ೧೬೦ ರಿಂದ ಕ್ರಿ.ಶ.ಪೂ. ೧೪೦. | |
| ೨ | ಕನಿಷ್ಕನ ಆಳಿಕೆ | ಕ್ರಿ. ಶ. | ೧೨೦—೧೯೦. |
| ೩ | ಫಾಹ್ಯೆನನು ಹಿಂದುಸ್ಥಾನದಲ್ಲಿದ್ದದ್ದು | ,, | ೪೦೫—೪೧೧. |
| ೪ | ಹರ್ಷನ ಆಳಿಕೆ | ,, | ೬೦೬—೬೪೭. |
| ೫ | ಹುವೆನ್‌ತ್ಸಂಗ | ,, | ೬೩೯. |
| ೬ | ಶಂಕರಾಚಾರ್ಯರ ಕಾಲ | ,, | ೭೮೮—೮೨೦. |
| ೭ | ವೀರಬಲ್ಲಾಳ | ,, | ೧೧೭೩—೧೨೨೦. |
| ೮ | ೫ನೆಯ ಭಿಲ್ಲಮ | ,, | ೧೧೮೭—೧೧೯೧. |



# ಪ್ರಾಚೀನಕಾಲದ ಇತಿಹಾಸದ ಆವರ್ತನೆಯು ಹಾಗು ಪರೀಕ್ಷೆಯ ಪ್ರಶ್ನೆಗಳು.



೧. ಚಂದ್ರಗುಪ್ತ, ಸಮುದ್ರಗುಪ್ತ, ೨ ನೆಯ ಪುಲಿಕೇಶಿ, ವಿಕ್ರಮಾಂಕ ಈ ನಾಲ್ವರಲ್ಲಿ ಬೇಕಾದ ಇಬ್ಬರ ಚರಿತ್ರೆಗಳನ್ನು ಬರೆಯಿರಿ.

೨. ಅಶೋಕನ ರಾಜ್ಯವ್ಯವಸ್ಥೆ, ಶ್ರೀಹರ್ಷನ ಯೋಗ್ಯತೆ, ಫಾಹೈನನ ಅಭಿಪ್ರಾಯ, ರಜಪುತರ ಉದಯ ಇವುಗಳ ವಿಷಯವಾಗಿ ಗೊತ್ತಿದ್ದುದನ್ನು ಸ್ವಲ್ಪದರಲ್ಲಿ ಬರೆಯಿರಿ.

೩. ಹ್ಯೂವೆನ್‌ತ್ಸಂಗ, ಸುವರ್ಣಯುಗ, ಕಾಲಿದಾಸ, ರನ್ನ, ಆರ್ಯಚಾಣಕ್ಯ, ನಾಲಂದ ಇವುಗಳ ಟಿಪ್ಪಣಿ ಕೊಡಿರಿ.

೪. ವೀರಶೈವಮತ ತತ್ವಗಳಾವವು ? ಈ ಮತದ ಪ್ರಸಾರದಿಂದ ಸಮಾಜದ ಮೇಲೆ ಆದ ಪರಿಣಾಮಗಳಾವವು ?

೫. ಹಿಂದುಸ್ಥಾನದ ನಕಾಶವನ್ನು ತೆಗೆದು ಕೆಳಗೆ ಬರೆದ ಸ್ಥಳಗಳನ್ನು ಆದರಲ್ಲಿ ಗುರ್ತಿಸಿರಿ; ಮತ್ತು ಅವುಗಳ ಐತಿಹಾಸಿಕ ಮಹತ್ವವನ್ನು ಸಂಕ್ಷಿಪ್ತದಲ್ಲಿ ಬರೆಯಿರಿ.

ಪಾಟಲೀಪುತ್ರ, ಸಿಂಧುನದ, ಮಧುರೆ, ಪೈಠಣ, ಬನವಾಸಿ.

೬. ಬೌದ್ಧಮತವು ಅಡಗಿದ ಕಾರಣಗಳಾವವು ? ಹಿಂದುಧರ್ಮದ ಮೇಲೆ ಬೌದ್ಧಧರ್ಮದ ಪರಿಣಾಮವು ಏನಾಯಿತು ?

೭. ಕನ್ನಡ ವಾಙ್ಮಯದ ಏಳ್ಗೆಯು ಯಾವ ಯಾವ ಅರಸರ ಕಾಲದಲ್ಲಿ ಆಯಿತು ? ಹ್ಯೂವೆನ್‌ತ್ಸಂಗನು ಕನ್ನಡಿಗರ ಸ್ಥಿತಿಯನ್ನು ವರ್ಣಿಸಿರುವದು ಹೇಗೆ ?

